# ಆಜಾದ ಹಿಂದ!

( ಸ್ವತಂತ್ರ ಭಾರತಸೇನೆಯ ಸಮಗ್ರ ಇತಿಹಾಸ )

ಸಂಪಾದಕರು :

**ಭಾಲಚಂದ್ರ ಘಾಣೇಕರ**
**ಮೋವುಂಡಿ ಮಲ್ಲಾರಿ**



—: ೩ನೇ ಆವೃತ್ತಿ :—

ಜನೆವರಿ ೧೯೪೬

ಬೆಲೆ: ೧—೦—೦

ಪ್ರಕಾಶಕರು :
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ



# ಪ್ರತಿಭಾ ಗ್ರಂಥಮಾಲೆ, ಧಾರವಾಡ

**ಯುಗಾದಿಯಿಂದ ಯುಗಾದಿಗೆ ೮ ಉತ್ತಮ ಕತೆ ಕಾದಂಬರಿಗಳು.**

**ವಾರ್ಷಿಕ ಚಂದಾ (ಪೋಸ್ಟ ರಜಿಸ್ಟರ ವೆಚ್ಚ ಸೇರಿ) ೯—೦—೦**

## ಹೊಸ ವರ್ಷದ ಪ್ರಕಟನೆಗಳು :

೧. ಹೆತ್ತಳಾ ತಾಯಿ (ಕಾರಂತರ ಕಾದಂಬರಿ) ೨—೦—೦
೨. ಭೂಮಾತೆ ಮತ್ತು ಮಂದಿರ (ಪರ್ಲಬಕ್ ಮತ್ತು ಶರತ್) ೧—೮—೦
೩. ಗಂಡು-ಹೆಣ್ಣಿನ ಸಮಸ್ಯೆ (ಕಾದಂಬರಿ ಭಾಗ ೨) ೧—೮—೦
೪-೫ ಬಿರುಗಾಳಿ (೧-೨ ಭಾ. ಪ್ರೊ. ಫಡಕೆಯವರ ಕಾದಂಬರಿ) ೩—೮—೦
೬. ಷೋಡಶಿ (ಶ್ರೇಷ್ಠ ಶರತ್ ಕಾದಂಬರಿ) ೨—೦—೦
೭. ರಮಾನಾಥ (ದಿ. ಪ್ರೇಮಚಂದರ ಶ್ರೇಷ್ಠ ಕಾದಂಬರಿ) ೨—೮—೦
೮. ಗುಲಾಬಿ ಹೂ (ಕಟ್ಟೀಮನಿ) ೧—೮—೦

## ಹೋದ ವರ್ಷದ ಹೊತ್ತಿಗೆಗಳು

೧. ಘಾಟೀ ಮುದುಕ ಮತ್ತು ಇತರ ಕತೆಗಳು (ದೇವುಡು) ೧—೮—೦
೨. ರಾಜಲಕ್ಷ್ಮಿ (ಶರತ್ ನೀಳ್ಗತೆಗಳು) ೧—೮—೦
೩. ಅನ್ನಪೂರ್ಣಾ ಮಂದಿರ (ನಿರುಪಮಾದೇವಿ ಕಾದಂಬರಿ) ೨—೦—೦
೪. ವೈಕುಂಠನ ಮೃತ್ಯುಪತ್ರ (ಶರತ್ ಕಾದಂಬರಿ) ೧—೮—೦
೫-೬ ಸಾವಿನ ಉಡಿಯಲ್ಲಿ (ಎನ್ಕೆ ಕಾದಂಬರಿ, ೧—೨ ಭಾಗ) ೩—೦—೦
೭. ಚಕಮಕಿ (ಶ್ರೀ. ಲ. ಜಿ. ಬೇಂದ್ರೆ ಕಥೆಗಳು) ೨—೦—೦
೮. ಗಂಡು-ಹೆಣ್ಣಿನ ಸಮಸ್ಯೆ (ಕುಪ್ಪಮ್ಮ ಕಾದಂಬರಿ ಭಾ. ೧) ೨—೦—೦

ಹೊಸ ವರ್ಷದ ಚಂದಾದಾರರಾಗುವವರಿಗೆ ಈ ಪುಸ್ತಕಗಳನ್ನು ಹತ್ತು ರೂ. ಗಳಿಗೆ ಕೊಡುತ್ತೇವೆ. ಅಂದರೆ ಒಟ್ಟಿಗೆ ೧೯-೦-೦ ಮನಿಯಾರ್ಡರು ಮಾಡಬೇಕು. ಮಿಕ್ಕವರಿಗೆ ಮೂಲ ಬೆಲೆ ಮತ್ತು ಅಂಚೇ ವೆಚ್ಚ ಕೂಡಿ ವ್ಹಿ. ಪಿ. ಮಾಡಲಾದೀತು.

ಮುದ್ರಕರು:
ಶೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ, ಧಾರವಾಡ

# ಮುಡಿಪು

---

ಭಾರತಮಾತೆಯ
ಬಂಧವಿಮೋಚನೆಗಾಗಿ ತನುಮನಧನದಿಂದ
ಹೋರಾಡಿದ

ಆಜಾದ ಹಿಂದ ವೀರರಿಗೆ-

# ಎರಡನೇ ಆವೃತ್ತಿ

ಕೆಂಪು ಕೋಟೆಯಲ್ಲಿ ಸುಭಾಸ ಸೇನಾಧಿಕಾರಿಗಳ ವಿಚಾರಣೆ ಆರಂಭವಾದಾಗ, ಆ ಸೇನೆಯ ವೀರ ಚರಿತ್ರೆಯನ್ನು ಸಂಗ್ರಹಿಸಿ ಪ್ರಕಟಿಸ ಬೇಕೆಂಬ ವಿಚಾರವು ನಮ್ಮಲ್ಲಿ ಉದಯವಾಯಿತು. ಆದರೆ ವಿಚಾರಣೆ ಯಲ್ಲಿ ಹೊರಬರುವ ಸರಕಾರದ ಆರೋಪಣಾ ಪತ್ರಿಕೆ, ಅವರಿವರ ಸಾಕ್ಷ್ಯ ಗಳು, ಮರುಸವಾಲಿನ ಪ್ರಶ್ನೋತ್ತರಗಳು, ಆರೋಪಿಗಳ ಹೇಳಿಕೆಗಳು ಇವೆಲ್ಲ ಬರುವವರೆಗೆ ಕಾಯಬೇಕಲ್ಲವೇ ?

ವಿಚಾರಣೆಯಲ್ಲಿಯ ಸಮಾಚಾರ ಸಂಗ್ರಹಕ್ಕಿಂತ, ಸಮಗ್ರ ಇತಿ- ಹಾಸವನ್ನೊದಗಿಸುವುದೇ ಕನ್ನಡ ಸಾಹಿತ್ಯದ ನಿಜವಾದ ಸೇವೆಯೆಂದು ಬಗೆದು ಅಲ್ಲಲ್ಲಿ ಪತ್ರಿಕೆಗಳಲ್ಲಿ ಬಂದ ಸಂಗತಿಗಳನ್ನು ಸಂಗ್ರಹಿಸಿದೆವು.

ಮದ್ರಾಸ ಸಾಹಿತ್ಯ ಸಮ್ಮೇಲನದ ಸಮಯಕ್ಕೆ ಇದನ್ನು ಕನ್ನಡಿ ಗರಿಗೆ ನೀಡಬೇಕೆಂದು ಅವಸರದಿಂದ ಪ್ರಕಟಿಸಿ ಹೊರಗೆ ಹಾಕಿದೆವು. ಆದರೆ ಪುಸ್ತಕ ಹೊರಗೆ ಬಂದ ಆರೇಳು ದಿವಸಗಳಲ್ಲೇ ಪ್ರತಿಗಳೆಲ್ಲ ಮಾರಿಹೋದುವು. ವಾಚಕರ ಬೇಡಿಕೆಯೂ ಹೆಚ್ಚಾಯಿತು. ಅದಕ್ಕಾಗಿ ಇದೀಗ ಎರಡನೇ ಆವೃತ್ತಿಯನ್ನು ಮತ್ತೆ ಅವಸರದಿಂದಲೇ ತೆಗೆಯಬೇಕಾ ಯಿತು. ಆದರೂ ಕೆಲವು ಹೆಚ್ಚಿನ ವಿಷಯಗಳನ್ನೂ ಸೇರಿಸಿದ್ದೇವೆ.

ಈ ಪುಸ್ತಕವು ಬೆಳಕಿಗೆ ಬರುವಷ್ಟರಲ್ಲಿ ಕೆಂಪು ಕೋಟೆಯಲ್ಲಿ ನಡೆದ ಸುಭಾಸ ಸೇನಾಪತಿ ತ್ರಯರ ವಿಚಾರಣೆಯೂ ಪೂರ್ತಿಯಾಗಿದೆ. ಆದುದರಿಂದ ಆ ವಿಷಯವನ್ನೂ ಸ್ವಲ್ಪ ಸಂಗ್ರಹಿಸಿದ್ದೇವೆ.

ಸಾಹಿತ್ಯಸೇವೆಯ ಜೊತೆಗೆ ಸುಭಾಸ ಸೇನಾನಿಧಿಗೆ ಸಹಾಯವನ್ನು ಸಲ್ಲಿಸುವ ವಿಚಾರದಿಂದ ಮೊದಲನೇ ಆವೃತ್ತಿಯ ಬೆಲೆ ಒಂದೂವರೆ ರೂ. ಇಟ್ಟದ್ದೆವು. ಆ ಮೇರೆಗೆ ಇನ್ನೂರು ರೂ. ಗಳನ್ನು ಸುಭಾಸ ಸೇನಾ ನಿಧಿಯ ಕರ್ನಾಟಕ ಪ್ರಾಂತದ ಕಾರ್ಯದರ್ಶಿಗಳಾದ ಬೆಳಗಾಂವಿಯ ಶ್ರೀ. ಎ. ಎ. ಮಂಡಗಿ ವಕೀಲರ ಕಡೆಗೆ ಸಲ್ಲಿಸಿದೆವು. ಈ ಬಾರಿ ಅಂಥ ಯಾವ ವಿಚಾರವನ್ನೂ ಇಡದೆ ಬಡಬಗ್ಗರಿಗೂ ಕೊಳ್ಳಲು ಅನುಕೂಲ ವಾಗಲೆಂದು— ಒಂದೇ ಒಂದು ರೂಪಾಯಿ ಬೆಲೆಯನ್ನಿಟ್ಟದ್ದೇವೆ.

ಈ ಪುಸ್ತಕಕ್ಕೆ ಚಿಕ್ಕ ಪರಿಚಯ ಬರೆದುಕೊಟ್ಟ ಶ್ರೀ. ಕರಮರಕರ ದತ್ತರಾಯರಿಗೂ ಹೊತ್ತಿಗೆ ಸರಿಯಾಗಿ ಮುದ್ರಣ ಮಾಡಿಕೊಟ್ಟು ನೆರವಾದ ಸಾಧನ ಮುದ್ರಣಾಲಯದವರಿಗೂ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

# ಹೋರಾಟದ ಮಹತ್ವದ ಮಿತಿಗಳು

| | | | |
|---|---|---|---|
| ೧೯೪೧ | ಡಿಸೆಂಬರ್ | ೭ | ಪೂರ್ವ ಏಶಿಯಾದಲ್ಲಿ ಯುದ್ಧಾರಂಭ. |
| ೧೯೪೨ | ಫೆಬ್ರುವರಿ | ೧೫ | ಸಿಂಗಾಪುರವು ಜಪಾನರ ವಶವಾದುದು. |
| | ಜೂನ್ | ೨೪ | ಸ್ವತಂತ್ರ ಭಾರತ ಸಂಘದ ಸ್ಥಾಪನೆ. |
| | ಡಿಸೆಂಬರ್ | | ಜಪಾನದೊಡನೆ ತಿಕ್ಕಾಟ. |
| ೧೯೪೩ | ಎಪ್ರಿಲ್ | ೧೮ | ಸ್ವ. ಭಾ. ಸಂಘದ ಸಮರ ಸಿದ್ಧತೆ. |
| | ಜುಲೈ | ೪ | ಸುಭಾಸ ಸ್ವ. ಭಾ. ಸಂಘದ ಅಧ್ಯಕ್ಷನಾದ. |
| | ಜುಲೈ | ೫ | ಆ. ಹಿಂ. ಫೌಜು ಜಗಜ್ಜಾಹೀರಾದುದು. |
| | ಅಗಸ್ಟ್ | ೨೫ | ಸುಭಾಸ ಆ. ಹಿಂ. ಫೌಜಿನ ಸೇನಾಪತಿಯಾದ. |
| | ಅಕ್ಟೋಬರ್ | ೨೧ | ಸ್ವ. ಭಾ. ತಾತ್ಪೂರ್ತಿಕ ಸರಕಾರದ ಸ್ಥಾಪನೆ. |
| | ಅಕ್ಟೋಬರ್ | ೨೨ | ಝಾಂಸಿ ರಾಣಿ ದಳದ ಅನಾವರಣ. |
| | ಅಕ್ಟೋಬರ್ | ೨೫ | ಬ್ರಿಟಿಶ್ ಸಾಮ್ರಾಜ್ಯ ಮತ್ತು ಅಮೇರಿಕೆಗಳ ವಿರುದ್ಧ ಯುದ್ಧ ಸಾರಿದುದು. |
| | ನವಂಬರ್ | ೮ | ಅಂದಮಾನ-ನಿಕೋಬಾರ ದ್ವೀಪಗಳು ಆಜಾದ ಹಿಂದ ಸರಕಾರದ ವಶ. |
| | ಡಿಸೆಂಬರ್ | ೩೦ | ಬ್ಲೇರ್ ಬಂದರದಲ್ಲಿ ತ್ರಿವರ್ಣ ಧ್ವಜಾರೋಹಣ |
| ೧೯೪೪ | ಜನೆವರಿ | ೮ | ಆ. ಹಿಂ. ಸರಕಾರ ರಂಗೂನಕ್ಕೆ ಬಂದುದು. ಮತ್ತು ಜ. ಲೋಕನಾಥನ್ ಶಾಹೀದ ದ್ವೀಪಗಳ ಚೀಫ್ ಕಮಿಶನರ್ ಆದುದು. |
| | ಮಾರ್ಚ್ | ೧೮ | ಆ. ಹಿಂ. ಸೇನೆಯ ಭಾರತ ಪ್ರವೇಶ. |
| | ಮಾರ್ಚ್ | ೨೨ | ಹಿಂದುಸ್ತಾನದಲ್ಲಿ ವಿಮುಕ್ತ ಪ್ರದೇಶಗಳಿಗೆ ಜ. ಚಟರ್ಜಿ ಗವ್ಹರ್ನರರಾದುದು. |
| | ಜುಲೈ | ೪ | ನೇತಾಜಿ ಸಪ್ತಾಹದ ಆರಂಭ. |
| | ಅಗಸ್ಟ್ | ೨೧ | ಮಳೆಗಾಲದಮೂಲಕ ಯುದ್ಧವನ್ನು ತಡೆದುದು. |
| ೧೯೪೫ | ಜನೆವರಿ | | ಆ. ಹಿಂ. ಸೇನೆಯ ದ್ವಿತೀಯ ಯುದ್ಧ. |
| | ಎಪ್ರಿಲ್ | ೨೪ | ಆ. ಹಿಂ. ಸರಕಾರವು ರಂಗೂನದಿಂದ ಬಂಕಾಕಕ್ಕೆ. |
| | ಮೇ. | ೩ | ರಂಗೂನವನ್ನು ಬ್ರಿಟಿಶರಿಗೆ ಬಿಟ್ಟುಕೊಟ್ಟುದು. |

# ಪರಿವಿಡಿ

# ಆಜಾದ ಹಿಂದ-ಸಂಕೇತಗಳು



"**ಜಯ್ ಹಿಂದ್**"— ಇದು ನಮ್ಮ ರಾಷ್ಟ್ರೀಯ ವಂದನೆ. ಹಿಂದೀಯನು ಹಿಂದೀಯನಿಗೆ ಭೆಟ್ಟಿಯಾಗುವ ಶಿಷ್ಟಾಚಾರ.

**ತಿರಂಗೀ**— ಚರಕಾಯುಕ್ತ ಧ್ವಜವೇ ನಮ್ಮ ರಾಷ್ಟ್ರಧ್ವಜ.

"**ಜಯ್ ಹೋ**"— ಎಂಬ ಟಾಗೋರರ ಪದವೇ ನಮ್ಮ ರಾಷ್ಟ್ರಗೀತ.

**ಹುಲಿ**— ಟೀಪೂ ಸುಲ್ತಾನನಿಂದ ಮನ್ನಣೆ ಹೊಂದಿದ ಹುಲಿಯ ಚಿನ್ಹವೇ ನಮ್ಮ ಸರಕಾರದ ಹೆಗ್ಗುರುತು. (ಸಿಕ್ಕಾ)

"**ಚಲೋ ದಿಲ್ಲೀ**"— ಇದು ನಮ್ಮ ರಣಕಹಳೆ.

"**ಇನ್‌ಕಿಲಾಬ್ ಝಿಂದಾಬಾದ**" "**ಆಜಾದ್ ಹಿಂದ್ ಝಿಂದಾಬಾದ್**" ಇವು ನಮ್ಮ ಜಯಘೋಷಗಳು.

"**ವಿಶ್ವಾಸ–ಐಕ್ಯತೆ–ಬಲಿದಾನ**" ಇವೇ ನಮ್ಮ ಧ್ಯೇಯಗಳು.

**ಅರ್ಝಿ ಹುಕುಮತ್—ಎ—ಅಝಾದ್ ಹಿಂದ್**

(ಸ್ವತಂತ್ರ ಹಿಂದುಸ್ತಾನದ ತಾತ್ಪೂರ್ತಿಕ ಸರಕಾರ)

# ಪುಸ್ತಕ ಪರಿಚಯು

ಹಿಂದುಸ್ತಾನದ ಅರ್ವಾಚೀನ ಇತಿಹಾಸದಲ್ಲಿಯೇ 'ಹಿಂದೀ ರಾಷ್ಟ್ರೀಯ ಸೇನೆ'ಯದು ಒಂದು ಅಪೂರ್ವ ಘಟನೆಯು. ಆ ಸೈನ್ಯದಲ್ಲಿ ಪ್ರಮುಖ ರೀತಿಯಿಂದ ಭಾಗವಹಿಸಿದ ಸೇನಾಪತಿಗಳ ವಿಚಾರಣೆಯು ಸದ್ಯಕ್ಕೆ ದಿಲ್ಲಿಯ ಕೆಂಪು ಕೋಟೆಯಲ್ಲಿ ನಡೆದಿದೆ. ಉಳಿದ ಕಡೆಗೆ ನಡೆಯಲಿದೆ. ಹಿಂದೀ ರಾಷ್ಟ್ರೀಯ ಸೇನೆಯ ಆಂದೋಲನದ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುವ ಕುತೂಹಲವು ಪ್ರತಿಯೊಬ್ಬ ಭಾರತೀಯ ನಲ್ಲಿಯೂ ಉಂಟಾಗಿದೆ. ಆ ಕುತೂಹಲವನ್ನು ಹಿಂಗಿಸುವ ಉದ್ದೇಶ ದಿಂದ ಸದ್ಯಕ್ಕೆ ಉಪಲಬ್ಧವಿದ್ದ ಸಾಮುಗ್ರಿಯ ಸಹಾಯದಿಂದ ಸುಲಭ ಭಾಷೆಯಲ್ಲಿ ಈ ಚಿಕ್ಕ ಹೊತ್ತಿಗೆಯು ಬರೆಯಲ್ಪಟ್ಟಿದೆ.

'ಹಿಂದೀ ರಾಷ್ಟ್ರೀಯ ಸೇನೆ'ಯ ಕಾರ್ಯವನ್ನು ಕುರಿತು ಮಾಡ ಬೇಕಾದ ವಿಮರ್ಶೆಯನ್ನು ಮುಂದಿನ ಇತಿಹಾಸಕಾರರು ಮಾಡುವರು. ಆ ಸೇನೆಯಲ್ಲಿಯ ಸೈನಿಕರ ಸಾಹಸವನ್ನೂ ದೇಶಾಭಿಮಾನವನ್ನೂ ದೇಶದ ಮುಖಂಡರು ಮುಕ್ತಕಂಠದಿಂದ ಕೊಂಡಾಡಿರುವರು. ಈ ಮೂಲ ಕವೇ ಅಹಿಂಸೆಯಲ್ಲಿಯೆ ಪೂರ್ಣ ಶ್ರದ್ಧೆಯನ್ನು ವಹಿಸಿದ ಕಾಂಗ್ರೆಸ್ಸೂ ಅವರ ರಕ್ಷಣೆಗಾಗಿ ಮುಂದೆ ಬಂದಿದೆ. ಇಂಥ ಸಮಯದಲ್ಲಿಯೆ ಈ ಚಿಕ್ಕ ಹೊತ್ತಿಗೆಯನ್ನು ಕನ್ನಡಿಗರಿಗೆ ಒದಗಿಸಿಕೊಟ್ಟು ಈ ಹಿಂದೀ ರಾಷ್ಟ್ರೀಯ ಸೇನೆಯ ಪರಿಚಯವನ್ನು ಮಾಡಿಕೊಟ್ಟ ಸಂಪಾದಕರ ಈ ಪ್ರಯತ್ನವನ್ನು ಕನ್ನಡಿಗರು ಸವಿಮಾಡಿಕೊಳ್ಳುವದರಲ್ಲಿ ಯಾವ ಸಂದೇಹವೂ ಇಲ್ಲ.

ದತ್ತಾತ್ರೇಯ ಕರಮರಕರ



ಹಿಜ್ ಎಕ್ಸಲನ್ಸಿ ನೇತಾಜಿ— ಸುಭಾಸಚಂದ್ರ ಬೋಸ
ಸ್ವತಂತ್ರ ಭಾರತ ಸರಕಾರದ ಪ್ರಮುಖ
ಸ್ವ. ಭಾ. ಸಂಘದ ಅಧ್ಯಕ್ಷ ಆ. ಹಿಂ. ಸೇನೆಯ ಪ್ರಧಾನ ಸೇನಾಪತಿ




# ಸತ್ತು ಅಮರರಾದ ಸುಭಾಸಚಂದ್ರ ಬೋಸ



ದೇಶಗೌರವ ಬಾಬೂ ಸುಭಾಸ ಬೋಸರು ೧೯೪೫ ಆಗಸ್ಟ ೧೮ಕ್ಕೆ ಫೊರ್ಮೋಸಾದಲ್ಲಿನ ತಾಯಿಹೋಕ ವಿಮಾನ ನಿಲ್ದಾಣದಲ್ಲಿ ವಿಮಾನ ಅಪಘಾತದಿಂದ ಗಾಯಗೊಂಡರು. ಅದೇ ದಿವಸ ಮಧ್ಯರಾತ್ರಿ ಅಲ್ಲಿಯ ಆಸ್ಪತ್ರೆಯೊಂದರಲ್ಲಿ ಮೃತರಾದರು! ಆಗಸ್ಟ ೨೪ರ ಪತ್ರಿಕೆಗಳಲ್ಲಿ ಅವರ ಶೋಚನೀಯ ನಿಧನದ ವಾರ್ತೆಯು ಎಲ್ಲ ದೇಶಗಳಲ್ಲಿಯೂ ಹಬ್ಬಿತು. ಆಗ ಸ್ವಾತಂತ್ರ್ಯವಾದೀ ಹಿಂದುಸ್ತಾನದ ಹೃದಯಕ್ಕೆ ಚೇಳು ಕುಟುಕಿದಷ್ಟು ವೇದನೆಯಾಯಿತು. ಮನದಲ್ಲಿ ವಿವಿಧ ಭಾವನೆಗಳು ಮಿಂಚಿ ಹೋದವು. ಹಿಂದುಸ್ತಾನದ ಸ್ವಾತಂತ್ರ್ಯ ಸಮರದ ಏರು-ಇಳಿತಗಳ ದುರ್ದೈವೀ ಇತಿಹಾಸವು ಕಣ್ಮುಂದೆ ಕಟ್ಟಿತು. ಸುಭಾಸ ಬಾಬುಗಳು ಹಿಂದುಸ್ತಾನದ ರಾಷ್ಟ್ರೀಯ ಚಳವಳಿಯಲ್ಲಿ ಅಗ್ರೇಸರರಾಗಿದ್ದರಲ್ಲದೆ ಹುರುಪಿನಿಂದ ಹೋರಾಡುವ ವೀರಾಧಿವೀರರಾಗಿದ್ದರು. ಉದಯೋನ್ಮುಖ ತರುಣ ಸ್ವಾತಂತ್ರ್ಯ ಪ್ರೇಮಿಗಳಿಗೆಲ್ಲ ಆದರ್ಶ ಮುಂದಾಳುಗಳಾಗಿದ್ದರು. ಸುಭಾಸ ಬಾಬುಗಳೆಂದರೆ ಯುದ್ಧ! ಸುಭಾಸ ಬಾಬುಗಳೆಂದರೆ ಬ್ರಿಟಿಷ್ ಸಾಮ್ರಾಜ್ಯ ವಿರೋಧೀ ತಂಡದ ನಾಯಕ! ಸುಭಾಸ ಬಾಬುಗಳೆಂದರೆ ಸ್ವಾತಂತ್ರ್ಯದ ದಿವ್ಯ ಜ್ಯೋತಿ ಎಂದು ಎಲ್ಲರಿಗೂ ಅನ್ನಿಸುವದು. ಹಿಂದುಸ್ತಾನದ ರಾಜಕಾರಣದಲ್ಲಿ ಭಾಗ ವಹಿಸಿದಾಗ ಕಾಂಗ್ರೆಸ್ಸಿನಲ್ಲಿಯೂ ಕಾಂಗ್ರೆಸ್ಸಿನ ಹೊರಗಡೆಯಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. "ಸ್ವಸಾಮರ್ಥ್ಯ ಹಾಗು ಸಂಘಟನಾ ಬಲದಿಂದ ಸ್ವಾತಂತ್ರ್ಯವನ್ನು ಕಸಿದುಕೊಳ್ಳತಕ್ಕದ್ದು" ಎಂಬುದೇ ಅವರ ಮಂತ್ರವಾಗಿತ್ತು. ಆ ತಳಹದಿಯ ಮೇಲೆಯೇ ಅವರು ಕಾರ್ಯಕ್ರಮಗಳನ್ನು ರಚಿಸುತ್ತಿದ್ದರು. ಅವರ ರಾಜಕೀಯ ಜೀವನವೆಂದರೆ ಬ್ರಿಟಿಷ್

ಸಾಮ್ರಾಜ್ಯಶಾಹಿಗಳಿಗೊಂದು ಬಹಿರಂಗ ಆಹ್ವಾನವೇ ಆಗಿದ್ದಿತು. ತಮ್ಮ ಮಾತೃಭೂಮಿಯ ಹಣೆಯ ಮೇಲೆ ಸ್ವಾತಂತ್ರ್ಯದ ಕುಂಕುಮ ತಿಲಕವನ್ನು ಹಚ್ಚಬೇಕು, ಅವಳ ಕಾಲೊಳಗಿನ ರಾಜಕೀಯ ಗುಲಾಮಗಿರಿಯ ಶೃಂಖಲೆಯನ್ನು ಕ್ರಾಂತಿಯೆಂಬ ಸುತ್ತಿಗೆಯಿಂದ ತುಂಡರಿಸಿ ಚೆಲ್ಲಬೇಕು ಎಂದು ಅವರ ಅಭಿಲಾಷೆಯಿತ್ತು. ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಸಶಸ್ತ್ರ ಯುದ್ಧವನ್ನು ಸಾರಿ ರಣಾಂಗಣದಲ್ಲಿ ಅವರ ಮೇಲೆ ಕೈಯೆತ್ತುವ ಯೋಗವು ೧೮೫೭ರ ನಂತರ ಯಾವ ಸ್ವಾತಂತ್ರ್ಯ ವೀರನ ಹಣೆಯಲ್ಲಿಯೂ ಬ್ರಹ್ಮನು ಬರೆದಿರಲಿಲ್ಲ. ಸುಭಾಸ ಬಾಬುಗಳು ಈ ಪರಾಕ್ರಮವನ್ನು ಮಾಡಿದರು. ಕೊನೆಗೆ ಸ್ವತಃ ಹೊತ್ತಿಸಿದ ರಣಕುಂಡದಲ್ಲಿ ಪ್ರಾಣಾಹುತಿಯನ್ನು ಕೊಟ್ಟರು. ಈ ಸಂಗತಿಯು ಹಿಂದುಸ್ಥಾನದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿಯುವದರಲ್ಲಿ ಸಂದೇಹವಿಲ್ಲ. ಅವರು ವೀರ ಪುರುಷರಾಗಿದ್ದರು. ವೀರರಿಗೆ ಸಲ್ಲುವಂತೆಯೇ ಆಯುಷ್ಯವನ್ನು ಕಳೆದರು. ರಾಷ್ಟ್ರರಾಷ್ಟ್ರಗಳಲ್ಲಿಯ ರಾಜಕೀಯ ಸಂಬಂಧವನ್ನು ನಿಯಂತ್ರಿಸುವ ದೈವೀ ಶಕ್ತಿಯು ತನ್ನ ಭಾವೀ ಯೋಜನೆಗನುಸರಿಸಿ ಅವರಿಗೆ ವಿಜಯಶ್ರೀಯನ್ನು ದೊರಕಿಸಿ ಕೊಡಲಿಲ್ಲವಾದರೂ ಅವರ ಮಾತೃಭೂಮಿಯು ಅವರನ್ನು ಆನಂದದಿಂದ, ಅಭಿಮಾನದಿಂದ, ಮೈದಡವಿ ಮುದ್ದಾಡದೆ ಇರಳು. ಸ್ವಾತಂತ್ರ್ಯವಾದೀ ತರುಣರು ಅವರನ್ನು ಅಭಿನಂದಿಸದೆ ಇರರು. ಅವರ ತ್ಯಾಗದ ಪುಣ್ಯದಿಂದ ಅವರ ಮಾತೃಭೂಮಿಯು ಸ್ವತಂತ್ರಳಾಗಿ ಮೆರೆಯುವ ಭಾಗ್ಯದ ದಿನವೂ ಒಂದು ಬರಬಹುದು.

### ದಾಸ ಮತ್ತು ಸುಭಾಸ

ಸುಭಾಸ ಬಾಬುಗಳ ಜೀವನದಲ್ಲಿ ನಡೆದ ಘಟನೆಗಳು ಸಾಮಾನ್ಯ ಪ್ರತಿಯವಲ್ಲ. ಇವುಗಳನ್ನು ಸಹಜವಾಗಿ ಕಣ್ಣುಮುಂದೆ ತಂದುಕೊಂಡರೂ ಮನಸ್ಸಿಗೆ ಆಶ್ಚರ್ಯವಾಗುತ್ತದೆ. ಬುದ್ಧಿಯು ಕುಂಠಿತವಾಗಿ ಅಂತಃಕರಣವು ಕೃತಜ್ಞತೆಯಿಂದ ತುಂಬಿಬರುತ್ತದೆ. ಬ್ರಿಟಿಷ್ ನೌಕರಶಾಹಿಗಳ ಕಣ್ಣಲ್ಲಿ ಹರಳಿನಂತೆ ಅವರು ಒತ್ತುತ್ತಿರುವದರ ಕಾರಣವು ಸ್ಪಷ್ಟವಾಗಿಯೇ ಇದೆ. ಹಿಂದೀ ಸ್ವಾತಂತ್ರ್ಯ ಸಮರದ ಮುಂಭಾಗದಲ್ಲಿ ಅನೇಕ ಮುಂದಾಳುಗಳಿದ್ದಾರೆ. ಆದರೆ ಸ್ಪಷ್ಟವಾದ ಮತ್ತು ನಿಶ್ಚಿತವಾದ

ಧ್ಯೇಯವನ್ನೂ ಮಾರ್ಗವನ್ನೂ ನಿರ್ಧರಿಸಿ ಆ ರೀತಿ ಅದನ್ನು ಸಾಧ್ಯ ಮಾಡಿಕೊಳ್ಳಲಿಕ್ಕೆ ನಿಶ್ಚಿತ ಕಾರ್ಯಕ್ರಮವನ್ನು ಗೊತ್ತುಪಡಿಸಿಕೊಂಡು ಆದಕ್ಕೆ ತೊಡಗುವಂಥ ಮುಂದಾಳುಗಳೆಂದರೆ ಇವರೇ ಎನ್ನಬಹುದು. ಸುಭಾಸಬಾಬುಗಳ ಸಾಹಸೀ ಕೃತ್ಯಗಳು ಇತಿಹಾಸದಲ್ಲಿ ಸೇರ್ಪಡೆ ಯಾದವೆಂದಬಳಿಕ ಅವರ ತತ್ವಜ್ಞಾನ ಮತ್ತು ಸಾಧನಗಳ ಚರ್ಚೆಯನ್ನು ಮಾಡಲೇನೂ ಅಡ್ಡಿಯಿಲ್ಲವಿನ್ನು. ಆ ಕಾರಣದಿಂದಾಗಿ ರಾಷ್ಟ್ರದ ವಿವೇಕ ಬುದ್ಧಿಯೇ ಹೆಚ್ಚು ಜಾಗೃತವಾಗಿ ಯೋಗ್ಯ ದಾರಿಯು ಕಂಡುಬರಬಹುದು. ಬ್ರಿಟಿಷ್ ಸಾಮ್ರಾಜ್ಯವಾದಿಗಳ ರಾಜಕೀಯ ಗುಲಾಮಗಿರಿಯಿಂದ ಸಾಧ್ಯವಿದ್ದಷ್ಟು ಬೇಗನೆ ಶಕ್ಯವಿದ್ದ ಎಲ್ಲ ಸಾಧನಗಳಿಂದಲೂ ಹಿಂದುಸ್ತಾನ ವನ್ನು ಬಂಧಮುಕ್ತ ಮಾಡಬೇಕೆಂದು ಅವರು ಪ್ರಯತ್ನಿಸುತ್ತಿದ್ದರು. ರಾಜಕೀಯ ರಂಗದಲ್ಲಿ ಸುಭಾಸ ಬಾಬುಗಳು ಬೆಳಗಿದ್ದು ಚಿತ್ತರಂಜನ ದಾಸರ ನೇತೃತ್ವದಲ್ಲಿ. ಅವರ ಸಹಾಯಕರಾಗಿದ್ದರು ಇವರು. ದೇಶ ಬಂಧು ದಾಸರು ಮುಂದೆ ಅಹಿಂಸೆ ಹಾಗು ಅಸಹಕಾರದ ವ್ರತವನ್ನು ಸ್ವೀಕರಿಸಿದರು. ಆದರೂ ಜಹಾಲರ ಮತ್ತು ಕ್ರಾಂತಿಕಾರರ ಬಗ್ಗೆ ಅವರಿಗೆ ಅನಾದರವಿರಲಿಲ್ಲ. ಅಹಿಂಸಾ ಮಾರ್ಗವನ್ನು ಬಿಟ್ಟು ಬೇರೆ ಯಾವುದೇ ಮಾರ್ಗದಿಂದ ಸ್ವರಾಜ್ಯವನ್ನು ಸಂಪಾದಿಸಿದ್ದಾದರೆ ಅಂಥ ಸ್ವರಾಜ್ಯದಲ್ಲಿ ತಾನಿರಲಾರೆನೆನ್ನುವಷ್ಟು ಮಡಿವಂತರು ಅವರಾಗಿರಲಿಲ್ಲ. ಅಹಮ್ಮದಾಬಾದದಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಗೋಪೀನಾಥ ಸಾಹಾಯೆಂಬ ಕ್ರಾಂತಿಕಾರನೊಬ್ಬನ ಬಗ್ಗೆ ನಿಂದಾವ್ಯಂಜಕ ಠರಾವು ಬಂದಾಗ್ಗೆ ದಾಸ ಬಾಬುಗಳು ಖಂಡತುಂಡ ವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

## ಬಂಡುಗಾರಿಕೆಯ ತತ್ವಜ್ಞಾನ

ಸುಭಾಸ ಬಾಬುಗಳೂ ಇದೇ ವಿಚಾರದ ಗುಂಪಿನವರು. ಅವರ ವಿಚಾರಸರಣಿಯು ಸ್ವಚ್ಛವಾಗಿದ್ದಿತು. ಬ್ರಿಟಿಷ್ ನೌಕರಶಾಹಿಗಳು ಯುದ್ಧ ದಲ್ಲಿಯ ಯಾವದೇ ನಿಯಮವನ್ನು ಪಾಲಿಸುವದಿಲ್ಲವೆಂದ ಮೇಲೆ ಹಿಂದೀ ಸ್ವಾತಂತ್ರ್ಯವಾದಿಗಳಾದರೂ ವಿಶಿಷ್ಟ ಬಂಧನಗಳಿಂದ ತಮ್ಮ ಕಾಲುಗಳ ನ್ನೇಕೆ ಕಟ್ಟಿಸಿಕೊಳ್ಳಬೇಕೆನ್ನುತ್ತಿದ್ದರು. ಡಾಯರ್-ಓಡ್‌ವಾಯರ್ ಅಂಥವರಿಗೆ ಅವರ ಅತ್ಯಾಚಾರಕ್ಕೆ ಬದಲಾಗಿ ಅತ್ಯಾಚಾರವೇ ಯೋಗ್ಯ

ವೆಂದು ಬಹಿರಂಗವಾಗಿ ಹೇಳುತ್ತಿದ್ದರು. ಅದೇ ರೀತಿಯಾಗಿ ನಿಃಶಸ್ತ್ರ ಪ್ರತೀಕಾರ ಮತ್ತು ಸಶಸ್ತ್ರ ಯುದ್ಧ ಈ ಎಲ್ಲ ಕ್ರಾಂತಿವಾದೀ ಮಾರ್ಗಗಳೂ ಅವರ ತತ್ವನಿಷ್ಠೆಯಲ್ಲಿ ಸಮಾವೇಶವಾಗುತ್ತಿದ್ದವು. ಮಹಾತ್ಮಾ ಗಾಂಧಿಯವರು ೧೯೨೦ ರಿಂದ ಪ್ರಚಾರ ಮಾಡಿದ ತತ್ವಜ್ಞಾನ ಮತ್ತು ಅಸತ್ಯಾಚಾರದ ವಿಚಾರ ಸರಣಿಗೂ ಇವರ ವಿಚಾರ ಸರಣಿಗೂ ಮೇಳು ಗೂಡುತ್ತಿರಲಿಲ್ಲ. ಬ್ರಿಟಿಷ್ ನೌಕರಶಾಹಿಗಳು ಸುಭಾಸರನ್ನು ಕಟ್ಟಾ ಶತ್ರುಗಳಂತೆ ಕಾಣುತ್ತಿದ್ದುದರಿಂದ ಅನೇಕ ಸಲ ಅವರನ್ನು ಸೆರೆಮನೆಗೆ ಅಟ್ಟಿದ್ದರು. ಕೊನೆಗೆ ಸುಭಾಸ ಬಾಬುಗಳೇ ಅವರನ್ನು ಸೋಲಿಸಿದರು. ಅವರನ್ನು ಕಾಯಲು ಕುಶಲರೂ, ನುರಿತವರೂ ಆದ ಪೋಲೀಸ ಅಧಿಕಾರಿಗಳನ್ನು ನಿಯಮಿಸಿದ್ದರೂ ಅವರ ಕಣ್ಣಿಗೆ ಅಂಜನ ಹಚ್ಚಿ ಹಿಂದುಸ್ತಾನವನ್ನೇ ಬಿಟ್ಟು ಹೊರಟು ಹೋದರು. ಅವರು ಹೇಗೆ ಹೋದರೆಂಬುವದು ಅಧಿಕಾರಿಗಳಿಗೆ ಇನ್ನೂವರೆಗೆ ತಿಳಿದಿಲ್ಲ. ಅವರು ಎಲ್ಲಿಯೋ ಹೋಗಿ ಕುಳಿತುಕೊಂಡು ಬಿಡಲಿಲ್ಲ. ಆಧುನಿಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ರಾಷ್ಟ್ರೀಯ ಸೈನ್ಯವನ್ನು ಸಂಘಟಿಸಿ, ಸ್ವತಂತ್ರ ಹಿಂದುಸ್ತಾನದ ಘೋಷಣೆಯನ್ನು ಮಾಡಿ, ಅದಕ್ಕೆ ಕೆಲವೇ ರಾಷ್ಟ್ರಗಳಿಂದಾಗಲೀ, ಅಂತರ್ರಾಷ್ಟ್ರೀಯ ಮಾನ್ಯತೆಯನ್ನು ದೊರಕಿಸಿದರು. ಅವರ ಈ ಮಾರ್ಗವು ಕೆಲವರಿಗೆ ಸರಿಯೆನಿಸಬಹುದು, ಕೆಲವರಿಗೆ ಅನಿಸದಿರಬಹುದು. ಏನೇ ಆದರೂ ಹಿಂದುಸ್ತಾನದ ಇತಿಹಾಸದಲ್ಲಿ ಇದೊಂದು ಮಹತ್ವದ ಘಟನೆಯಾಗಿತ್ತೆನ್ನಬಹುದು. ಬ್ರಿಟಿಷ್ ಸರಕಾರದವರು ತಮ್ಮ ವಿಜಯದ ನಂತರ ಇದರ ಸೇಡನ್ನು ತೀರಿಸಿಕೊಳ್ಳಬಹುದಿತ್ತು. ಆದರೆ ಸುಭಾಸ ಬಾಬುಗಳು ತಮ್ಮ ಮರಣದಿಂದ ಈ ವಿಷಯದಲ್ಲೂ ಅವರ ನಿರಾಶೆ ಮಾಡಿದರೆನ್ನಬಹುದು.

## ಹಿಟ್ಲರನ ಅವಹೇಳನೆ

ಸುಭಾಸ ಬಾಬುಗಳು ಕಳೆದ ಮಹಾಯುದ್ಧದಲ್ಲಿ ಜಪಾನ-ಜರ್ಮನಿಗಳ ಜೊತೆಗೆ ಕೂಡಿದ್ದು ಅತ್ಯಂತ ನಿಂದ್ಯವಾದ ಮತ್ತು ದೇಶದ್ರೋಹದ ಸಂಗತಿಯಾಗಿದೆಯೆಂದು ಬ್ರಿಟಿಷರಿಷ್ಟೇ ಅಲ್ಲ ಅನೇಕ ಹಿಂದೀ ವಿಚಾರಶಾಲಿಗಳೂ ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯದಲ್ಲಿ ಕೊನೆಯ ನಿರ್ಣಯವನ್ನು ಭಾವೀ ಇತಿಹಾಸವೇ ಕೊಡಬಲ್ಲದು. ಅವರ ದಾರಿ ತಪ್ಪಾದದ್ದೆಂದು ಭಾವಿಸಿದರೂ ಅವರ ಉದ್ದೇಶವು ಎಷ್ಟು ಪರಿಶುದ್ಧ

ವಾದದ್ದಿತ್ತೆಂಬುದನ್ನು ಸಮದೃಷ್ಟಿಯಿಂದ ನೋಡಿದರೆ ಮಾತ್ರ ಈ ವಿಷಯದಲ್ಲಿ ನ್ಯಾಯಬುದ್ಧಿಯನ್ನು ಹಿಡಿತದಲ್ಲಿಟ್ಟಂತಾಗುವದು. ಹಿಟ್ಲರನ ಬಗ್ಗೆ ಅವರಲ್ಲಿ ಹೆಚ್ಚಿನ ಆದರವಿರಲಿಲ್ಲ. ೧೯೩೪ ರಲ್ಲಿ ಸುಭಾಸ ಬಾಬು ಗಳು ಜರ್ಮನಿಯಲ್ಲಿದ್ದರು. ಆ ಕಾಲದ ಕಥೆಯೊಂದನ್ನು ಹೇಳುತ್ತಾರೆ. ನಾಝೀ ಪಕ್ಷದ ಮುಂದಾಳುಗಳೆಲ್ಲ ಸೇರಿ ಮ್ಯುನಿಕ್‌ದಲ್ಲಿ ಸುಭಾಸ ಬಾಬುಗಳಿಗೆ ಒಂದು ದೊಡ್ಡ ಸತ್ಕಾರವನ್ನು ಮಾಡುವ ನಿರ್ಣಯವನ್ನು ಮಾಡಿದ್ದರು. ಆದರೆ ಅದರ ಮೊದಲನೇ ದಿನ ಹಿಟ್ಲರನು ತನ್ನದೊಂದು ಭಾಷಣದಲ್ಲಿ ಹಿಂದುಸ್ಥಾನದಲ್ಲಿಯ ಬ್ರಿಟಿಷರ ರಾಜ್ಯದ ಬಗ್ಗೆ ಹೊಗಳಿಕೆಯ ದೊಡ್ಡದೊಂದು ಉದ್ಗಾರವನ್ನು ತೆಗೆದನಂತೆ. ಈ ಭಾಷಣವನ್ನು ಕೇಳಿ ಸುಭಾಸ ಬಾಬುಗಳು ಸತ್ಕಾರದ ಆಮಂತ್ರಣವನ್ನು ತಿರಸ್ಕರಿಸಿದರು. ಕಟು ವಾಕ್ಯಗಳಿಂದ ಹಿಟ್ಲರನ ಅವಹೇಳನೆ ಮಾಡಿದರು. "ಸ್ವೇಚ್ಛೆಯಿಂದ ಹಿಟ್ಲರನು ಬ್ರಿಟಿಷರ ಬೂಟು ನೆಕ್ಕಲಿ!" ಎಂದು ನುಡಿದರು. ಆ ಬಳಿಕ ಅವರು ಡಬ್ಲಿನ್‌ಕ್ಕೆ ಹೋದರು. ಅಲ್ಲಿಯ ಆಕಾಶವಾಣಿಯಲ್ಲಿ ಭಾಷಣ ಮಾಡಿ "ಹಿಂದುಸ್ಥಾನದಲ್ಲಿಯ ಬ್ರಿಟಿಷರ ದಬ್ಬಾಳಿಕೆ"ಯನ್ನು ವಿವರಿಸಿ ಹಿಟ್ಲರನ ಭಾಷಣಕ್ಕೆ ಉತ್ತರ ಕೊಟ್ಟರು. ಹಿಟ್ಲರನ ಬಗ್ಗೆಯೇ ಆಗಲಿ, ಟೋಜೋ ಅಥವಾ ಮುಸೊಲೋನಿಯ ಬಗ್ಗೆಯೇ ಆಗಲಿ ಇವರಿಗೆ ಆದರವಿರಲಿಲ್ಲ. ವಿಶ್ವಾಸವೂ ಹೆಚ್ಚಾಗಿರಲಿಲ್ಲ. ಹಿಂದುಸ್ಥಾನದ ಸ್ವಾತಂತ್ರ್ಯ ಸಾಧನೆಗಾಗಿ ಅವರು ಕೆಲವು ಹಂಚಿಕೆಗಳನ್ನು ಮಾಡಿಟ್ಟಿದ್ದರು. ಅವುಗಳನ್ನು ನೆರವೇರಿಸುವದಕ್ಕಾಗಿ ಆವಶ್ಯಕತೆಯು ಹುಟ್ಟಿಗ ಅವರಿಂದ ತಾವು ಸಹಾಯವನ್ನು ಪಡೆದಿರುವದಾಗಿ ಸುಭಾಸರು ಹೇಳಿರುವದು ಗಮನಾರ್ಹವಾದ ವಿಷಯವಾಗಿದೆ. ಹಿಂದೀ ಸ್ವಾತಂತ್ರ್ಯದ ಬಗ್ಗೆ ಪವಿತ್ರವಾದ ಪ್ರೇಮ ಅವರದಾಗಿದ್ದಿತು. ಒಬ್ಬರ ಗುಲಾಮಗಿರಿಯೆಂಬ ಬೆಂಕಿಯಿಂದ ಪಾರಾಗಿ ಮತ್ತೊಬ್ಬರ ಪಾರತಂತ್ರ್ಯವೆಂಬ ಬಲೆಯಲ್ಲಿ ಸಿಲುಕಿಕೊಂಡಿರಲು ಅವರು ಮನಸ್ಸು ಮಾಡುವವರಲ್ಲ.

## ಸುಭಾಸ ಚಂದ್ರರ ವಿಚಾರಸರಣಿ

ಈ ವಿಷಯದಲ್ಲಿ ಅವರ ಅಭಿಪ್ರಾಯವೇನಿತ್ತೆಂಬುದನ್ನು ಅವರ ಶಬ್ದಗಳಲ್ಲಿಯೇ ಮಂಡಿಸಿದರೆ ಸ್ಪಷ್ಟವಾಗುವದು. ಸುಭಾಸ ಬಾಬುಗಳು ಆಕಾಶವಾಣಿಯಲ್ಲಿ ಹಿಂದೀ ರಾಜಕಾರಣದ ಬಗ್ಗೆ ಮಾಡಿದ ಭಾಷಣವೊಂದು ಪ್ರಸಿದ್ಧವಾಗಿದೆ. ಅದರಲ್ಲಿ ಅವರು ತಮ್ಮ ಮನಸ್ಸಿನ ಹಾಗು

ವಿಚಾರಗಳ ಗುರಿಯೇನಿತ್ತೆಂಬುದನ್ನು ಸ್ಪಷ್ಟವಾಗಿ ನುಡಿಸಿದ್ದರು. ಎಲೆನ್ ಎಂಡ್ ಎನ್ವಿನ್‌ಯೆಂಬ ಪ್ರಸಿದ್ಧ ಪುಸ್ತಕ ವ್ಯಾಪಾರಿಯು ೧೯೪೩ ರಲ್ಲಿ "ಟಾಕಿಂಗ್ ಟು ಇಂಡಿಯಾ"ಯೆಂಬ ಹೆಸರಿನ ಪುಸ್ತಕವನ್ನು ಪ್ರಕಟಿಸಿದ್ದಾನೆ. ಅದರಲ್ಲಿ ಬ್ರಿಟಿಷ್ ಮುಂದಾಳುಗಳನೇಕರ ಭಾಷಣಗಳು ಪ್ರಕಟವಾಗಿವೆ. ಅದೇ ಮೇರೆಗೆ ಸುಭಾಸ ಬಾಬುಗಳು ಮೇ ೧೯೪೩ ರಲ್ಲಿ ಬರ್ಲಿನ್. ಆಕಾಶವಾಣಿಯಲ್ಲಿ ಮಾಡಿದ ಭಾಷಣವೂ ಪ್ರಕಟವಾಗಿದೆ. ಅದರಲ್ಲಿ ಈ ವಿಶಿಷ್ಟ ವಿಷಯವಾಗಿ ಏನು ಆಡಿದ್ದಾರೆ ನೋಡೋಣ.

"ಕಳೆದ ಇನ್ನೂರು ವರ್ಷಗಳ ಇತಿಹಾಸವನ್ನು ನಾನು ಚೆನ್ನಾಗಿ ಅಭ್ಯಾಸ ಮಾಡಿದ್ದೇನೆ. ಮುಖ್ಯವಾಗಿ ಪಾರತಂತ್ರ್ಯದಲ್ಲಿದ್ದ ರಾಷ್ಟ್ರಗಳು ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದನ್ನು ಹೆಚ್ಚು ಗಮನ ಕೊಟ್ಟು ಓದಿದ್ದೇನೆ. ಬೇರೆ ರಾಷ್ಟ್ರದವರ ನೆರವಿಲ್ಲದೆ ಜಯ ಹೊಂದಿದಂಥ ಒಂದು ರಾಷ್ಟ್ರವೂ ನನ್ನ ಕಣ್ಣಿಗೆ ಬೀಳಲಿಲ್ಲ. ಗ್ರೇಟ್ ಬ್ರಿಟನ್ನಿನವರೂ ಇಂದು ಜಗತ್ತಿನ ಬೇರೆ ರಾಷ್ಟ್ರಗಳ ಸಹಾಯವನ್ನು ಕೋರಿದ್ದಾರೆ. ಅಷ್ಟೇ ಅಲ್ಲ—ಹಿಂದುಸ್ತಾನದಂಥ ಪರತಂತ್ರ ರಾಷ್ಟ್ರದ ಸಹಾಯವನ್ನೂ ತೆಗೆದುಕೊಳ್ಳುತ್ತಿದ್ದಾರೆ. ಇಂಥ ಸಹಾಯವನ್ನು ಕೇಳುವದರಲ್ಲಿ ಏನೂ ತಪ್ಪು ಆಗದಿದ್ದರೆ, ಹಿಂದುಸ್ತಾನಕ್ಕೆ ಎರಡನೇ ರಾಷ್ಟ್ರವು ಸಹಾಯ ಮಾಡಲು ಮುಂದಾಗಿ ಬಂದರೆ ಆ ಸಹಾಯವನ್ನು ತೆಗೆದುಕೊಳ್ಳುವದರಲ್ಲಿ ತಪ್ಪಾಗುವದೆಂದು ಕಾಣುವದಿಲ್ಲ. ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ ನಡೆದ ಕೊನೆಯ ಹೋರಾಟದಲ್ಲಿ ಈ ಬಗೆಯ ನೆರವನ್ನು ಕೊಡಲು ಯಾವುದೊಂದು ರಾಷ್ಟ್ರವು ಮುಂದೆ ಬಂದರೆ ಆ ನೆರವನ್ನು ನಾವು ಆನಂದದಿಂದ ಸ್ವೀಕರಿಸುವೆವು." ಜಪಾನದ ನೆರವು ಬೇಡುವ ಸುಭಾಸ ಬಾಬುಗಳ ಈ ವಿಚಾರವು ತಪ್ಪಿನದೂ, ಅಯೋಗ್ಯವಾದದ್ದೂ ಇರಬಹುದು. ಜಪಾನಿಯರ ಇತಿಹಾಸ, ಅವರು ಚೀನದ ಮೇಲೆ ಮಾಡಿದ ಅತ್ಯಾಚಾರ ಬೈಲಿಗೆ ಬಂದೇ ಇವೆ. ಆದರೂ ಸುಭಾಸರ ವಿಚಾರಸರಣಿಯು ಪ್ರಾಮಾಣಿಕವಾಗಿತ್ತೆಂಬುದನ್ನು ಯಾರೂ ಅಲ್ಲಗಳೆಯಲಾರರು.

### ಭಾರತಾಂಬೆಯ ಸೇವಕ

ಆಕಾಶವಾಣಿಯಲ್ಲಿ ಅವರು ಮಾಡಿದ ಭಾಷಣದಲ್ಲಿ ಮತ್ತೊಂದು ಮಹತ್ತ್ವದ ಸಂಗತಿಯನ್ನು ಉಲ್ಲೇಖಿಸಿದ್ದಾರೆ:

“ನಾನು ಜಪಾನ, ಜರ್ಮನಿ, ಇಟಲಿ ಈ ತ್ರಿಕೂಟದ ಸಮರ್ಥನೆ ಮಾಡುವವನಲ್ಲ. ಅದು ನನ್ನ ಕೆಲಸವೂ ಅಲ್ಲ. ಬ್ರಿಟಿಷರ ಪ್ರಚಾರಕರು ನಾನು ಶತ್ರು ಪಕ್ಷದ ಹಸ್ತಕನೆಂದು ಸಾರುತ್ತಿದ್ದಾರೆ. ಆದರೆ ಇದು ನಿಜವಲ್ಲ. ನನ್ನ ಜೀವನವು ಬ್ರಿಟಿಷ್ ಸಾಮ್ರಾಜ್ಯದೊಡನೆ ನಡೆದ ದೀರ್ಘ ಹೋರಾಟದಿಂದ ತುಂಬಿಕೊಂಡಿದೆ. ಇಡೀ ಆಯುಷ್ಯವನ್ನೆಲ್ಲ ಹಿಂದುಸ್ತಾನದ ಸೇವಕನಾಗಿ ಕಳೆದಿದ್ದೇನೆ. ನನ್ನ ಶರೀರದಲ್ಲಿ ಪ್ರಾಣವಿರುವವರೆಗೂ ನಾನು ಹಿಂದುಸ್ತಾನದ ಸೇವಕನಾಗಿಯೇ ಜೀವಿಸುವೆನು. ನಾನು ಜಗತ್ತಿನ ಯಾವ ಮೂಲೆಯಲ್ಲಿದ್ದರೂ ಭಾರತಾಂಬೆಯ ಸೇವೆಗಾಗಿಯೇ ನನ್ನ ಜೀವನವನ್ನು ಅರ್ಪಿಸುವೆನು. ಆಕೆಯ ಭಕ್ತಿಗಾಗಿ ಅದನ್ನು ಮುಡಿಪಾಗಿ ಕೊಟ್ಟುಬಿಟ್ಟಿರುವೆನೆಂದೇ ಭಾವಿಸಿದ್ದೇನೆ.” ಅವರ ಈ ಮಾತಿಗಾಗಿ ಅವರ ಶತ್ರುಗಳು ಏನೇ ಅಂದುಕೊಳ್ಳಲಿ, ಆದರೆ ಅವರ ಜೀವನಯಾತ್ರೆಯ ಸಂಪೂರ್ಣ ಪರಿಚಯವಿದ್ದ ಯಾವ ಹಿಂದೀಯನೇ ಆಗಲಿ ಅವರ ಮಾತನ್ನು ನಂಬದೇ ಇರಲಾರನು. ಸುಭಾಸ ಬಾಬುಗಳು ಅನುಸರಿಸಿದ ಧೋರಣೆಯ ಬಗ್ಗೆ ಮತಭೇದವಿರಬಹುದು. ಆದರೆ ಅವರಿಗೆ ಹಿಂದುಸ್ತಾನವು ಸ್ವತಂತ್ರವಾಗಬೇಕು, ಅದು ಬೇರೆ ಯಾರ ಅಂಕಿತಕ್ಕೂ ಹೋಗಬಾರದು ಎಂದು ಅನಿಸುತ್ತಿರಲಿಕ್ಕೆಬೇಕು, ಈ ಬಗ್ಗೆ ಬಹುಸಂಖ್ಯ ಹಿಂದೀ ಜನರಿಗಂತೂ ವಿಶ್ವಾಸವಿದೆ. ಅವರ ಹೃದಯಾಂತರಾಳದಲ್ಲಿ ಹಿಂದೀ ಸ್ವಾತಂತ್ರ್ಯದ ಉತ್ಕಟ ಭಾವನೆಯ ಹೊರತು ಬೇರೆ ಯಾವದೇ ಕ್ಷುದ್ರ ವಿಚಾರವಿರಲಿಲ್ಲವೆಂಬುದನ್ನು ಮೇಲ್ಕಾಣಿಸಿದ ಅವರ ಮಾತಿನಿಂದ ಸಿದ್ಧವಾಗುವದಿಲ್ಲವೇನು? ಅವರ ಜೀವನವೇ ಅದರ ಸಾಕ್ಷಿಯಾಗಿದೆ!

## ಹಿಮಾಲಯದಲ್ಲಿ ಯೋಗಸಾಧನೆ

ಮರಣ ಕಾಲಕ್ಕೆ ಸುಭಾಸ ಬಾಬುಗಳ ವಯಸ್ಸು ಕೇವಲ ನಲವತ್ತೆಂಟು. ಅವರ ಪರಾಕ್ರಮವೆಂಬ ಮೊಗ್ಗೆ ಇನ್ನು ಮುಂದೆಯೆ ಅರಳುವದಿತ್ತು. ಮಹಾತ್ಮಾ ಗಾಂಧಿಯವರು ಕೂಡ ರಾಜಕಾರಣದ ಸೂತ್ರಧಾರರಾದದ್ದು ಐವತ್ತೆರಡನೆಯ ವಯಸ್ಸಿನಲ್ಲಿ. ಈ ದೃಷ್ಟಿಯಿಂದ ನೋಡಿದರೆ ಸುಭಾಸ ಬಾಬುಗಳು ತೀರ ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದರೆನ್ನಬಹುದು. ಅವರು ಹುಟ್ಟಿದ್ದು ೨೩ನೇ ಜನೆವರಿ ೧೮೯೭ರಲ್ಲಿ. ಜನ್ಮಸ್ಥಳ ಕಟಕವೆಂಬುದಾಗಿತ್ತು. ಅವರ ತಂದೆ ಶ್ರೀ ಜಾನಕೀದಾಸ, ತಾಯಿ

ಪ್ರಭಾವತಿದೇವಿ. ಇವರಿಗೆ ಹನ್ನೆರಡು ಮಕ್ಕಳು. ಆದರೂ ಸುಭಾಸರ ಮೇಲೆ ಇವರಿಗೆ ಹೆಚ್ಚಿನ ಮಮತೆ. ಜಾನಕೀದಾಸರು ವಕೀಲರೂ, ಶ್ರೇಷ್ಠ ಮನೆತನಸ್ಥರೂ ಆಗಿದ್ದರು. ಇಂಥ ಸುಖವಸ್ತುಗಳ ಕುಟುಂಬ ದಲ್ಲಿ ಚಿಕ್ಕ ಸುಭಾಸ ಬಾಬು ಬೆಳೆಯುತ್ತಿದ್ದದು. ತಾಯಿಯ ಧಾರ್ಮಿಕ ವಿಚಾರ ಹಾಗು ಸಂಸ್ಕಾರಗಳ ಪರಿಣಾಮವಾಗಿ ಬಾಲ್ಯದಿಂದಲೂ ಅವರು ವಿರಾಗಿ ಹಾಗು ಚಿಂತನಶೀಲರಾಗುತ್ತಿದ್ದರು. ಮುಂದೆ ಅವರ ಶಿಕ್ಷಣವು ಪಾಶ್ಚಾತ್ಯ ಪದ್ಧತಿಯ ಸುಖ ಸೌಕರ್ಯಗಳಿಂದ ಯುಕ್ತವಾದ, ರೀತಿ ರಿವಾಜುಗಳಿಂದ ತುಂಬಿಕೊಂಡ ಪ್ರಾಟೆಸ್ಟಂಟ್ ಯುರೋಪಿಯನ್ ಸ್ಕೂಲ್ ಮತ್ತು ರೇವನ್‌ಷಾ ಕಾಲೇಜಿಯೆಟ್ ಸ್ಕೂಲಿನಲ್ಲಿ ಆಯಿತು. ೧೯೧೩ರ ಕೊನೆಗೆ ಮೆಟ್ರಿಕ್ ಪಾಸು ಮಾಡಿದರು. ಯುನಿವರ್‌ಸಿಟಿಗೆ ಎರಡನೇ ನಂಬರಿನಲ್ಲಿ ಪಾಸಾದುದರಿಂದ ತಂದೆ-ತಾಯಿಗಳು ಸಂತೋಷ ಸಾಗರದಲ್ಲಿ ತೇಲಾಡಿದರು. ಆಗಲೇ ಅವರ ಬುದ್ಧಿ ಎಲ್ಲರ ಮೇಲೆ ಪ್ರಭಾವ ಬೀರಿತು. ಆದರೆ ಸ್ವತಃ ಸುಭಾಸರಿಗೆ ಈ ಬಗ್ಗೆ ಹೆಮ್ಮೆಯೆನಿಸ ಲಿಲ್ಲ. ಅವರ ವಿಚಾರವೇ ಬೇರೆ ಇತ್ತು. ಬಂಗಾಲದಲ್ಲಿ ಆಗ ತರುಣರಲ್ಲಿ ದೇಶಭಕ್ತಿಯ ತೆರೆಗಳು ಏಳತೊಡಗಿದ್ದವು. ಕಠೋರವಾದ–ಸಂಪೂರ್ಣ ತ್ಯಾಗವೆಂಬ ಜಲದಲ್ಲಿ ಆಗಿನ ತರುಣರು ವಿಹರಿಸುತ್ತಿದ್ದರು. ಆ ತ್ಯಾಗದ ಪರಿಣಾಮವು ಅವರ ಮೇಲೆ ಆಗತೊಡಗಿತ್ತು. ಅವರ ಶಾಲೆಯ ಮುಖ್ಯಾ ಧ್ಯಾಪಕರಾದ ವೇಣಿ ಬಾಬು ಮತ್ತು ಅಣ್ಣನ ಸಮಾನರಾದ ಗೆಳೆಯ ಹೇಮಂತ ಕುಮಾರ ಇವರ ಆಕರ್ಷಣದಿಂದ ಅವರು ಆ ಪ್ರವಾಹಕ್ಕೆ ಇಳಿದರು. ಧಾರ್ಮಿಕ ಪ್ರವೃತ್ತಿ ಮತ್ತು ತರುಣರಿಗೆ ಆಕರ್ಷಕವಾದ ಪರಾಕ್ರಮದ ಅಭಿರುಚಿ ಇವುಗಳಲ್ಲಿ ಕಾದಾಟ ನಡೆದಿತ್ತು. ಕೊನೆಗೆ ಧಾರ್ಮಿಕ ಪ್ರವೃತ್ತಿಗೇ ವಿಜಯವಾಯಿತು. ಸುಭಾಸ ಬಾಬುಗಳು ೧೯೧೪ ರಲ್ಲಿ ದೀಪಾವಳಿ ಹಬ್ಬದ ಮೊದಲೇ ಕಾಲೇಜಿಗೆ ಶರಣು ಹೊಡೆದು ಯೋಗ ಸಾಧನಾರ್ಥವಾಗಿ ಹಿಮಾಲಯಕ್ಕೆ ಹೊರಟು ಹೋದರು.

## ಬುದ್ಧನ ಅವತಾರವೇ ?

ಇವರು ಬುದ್ಧನ ಅವತಾರವಾಗಿದ್ದಾರೆಂದು ಸುಭಾಸ ಬಾಬುಗಳಿಗೆ ಅವರ ಜೀವದ ಗೆಳೆಯರು ದೊಡ್ಡವರಾದಮೇಲೆಯೂ ಅನ್ನುತ್ತಿದ್ದರು. ಇದರ ಕಾರಣವೂ ಮನೋರಂಜಕವಾದುದೇ ಇದೆ. ಸುಭಾಸ ಬಾಬುಗಳ

ಮೈಕಟ್ಟು, ವಿಶೇಷತಃ ಮುಖಚರ್ಯೆ ಬಾಲ್ಯದಲ್ಲಿ ಬುದ್ಧನನ್ನೇ ಹೋಲುತ್ತಿದ್ದುವು. ಬುದ್ಧಗಯಾದಲ್ಲಿನ ಬುದ್ಧನ ಪುಥ್ಥಳಿಯನ್ನು ನೋಡಿದವರಿಗೆ ಸುಭಾಸರ ಮೂಗು, ಕಣ್ಣು, ಮುಖ ಇವುಗಳ ಹೋಲಿಕೆಯೂ ಆ ಪುಥ್ಥಳಿಯಲ್ಲಿಯ ಬುದ್ಧನಂತೆಯೇ ಇದೆಯೆಂದೆನ್ನಿಸದೆ ಇರಲಾರದು. ಅವರು ದೊಡ್ಡವರಾದ ಮೇಲೆಯೂ ಈ ಸಾಮ್ಯವು ಗಮನಕ್ಕೆ ಬರುತ್ತಿದ್ದಿತು. ಕೆಲವು ಸಲ ಈ ಬಗ್ಗೆ ಮಿತ್ರರು ವಿನೋದವನ್ನೂ ಮಾಡುತ್ತಿದ್ದರು. "ಆಕಾರೇಂಗಿತ ಪ್ರಜ್ಞಾ" ಯೆಂಬ ನ್ಯಾಯವನ್ನು ಮನ್ನಿಸಿದ್ದಾದರೆ ಬುದ್ಧನಂತೆಯೇ ಈ ತರುಣನು ಹದಿನಾರನೇ ವಯಸ್ಸಿನಲ್ಲಿಯೇ ಸುಖದ ಜೀವನವನ್ನು ಬಿಟ್ಟು ಹಿಮಾಲಯದ ಕಷ್ಟತರವಾದ ಜೀವನವನ್ನು ಸ್ವೀಕರಿಸಿದ್ದರಲ್ಲೇನೂ ಆಶ್ಚರ್ಯವಿಲ್ಲ. ಹಿಮಾಲಯದಲ್ಲಿ ಅವರು ಏನು ಮಾಡಿದರು? ಯಾವ ಯೋಗಿಯನ್ನು ಸಂದರ್ಶಿಸಿದರು? ಯಾವ ತಪಸ್ಸನ್ನು ಮಾಡಿದರು? ಇದು ಗೂಢವೇ ಇದೆ. ತೀರ್ಥಯಾತ್ರೆ ಮಾಡುತ್ತಿದ್ದಾಗ ಕೊನೆಗೊಮ್ಮೆ ಕಾಹಿಲೆ ಬಿದ್ದರು. ಅದಕ್ಕಾಗಿ ಅವರನ್ನು ಮನೆಗೆ ತರಬೇಕಾಯಿತು. ಅವರು ತಮ್ಮ ಧಾರ್ಮಿಕ ಪ್ರವೃತ್ತಿಯ ವಿಚಾರವಾಗಿ "ಮಾಡರ್ನ್ ರೆವ್ಯೂ"ದಲ್ಲಿ ಬರೆದ ಲೇಖನವು ಓದತಕ್ಕುದಾಗಿದೆ. ಅವರ ಅಂತರಂಗದ ಬೆಳಕನ್ನು ಆ ಲೇಖನದಲ್ಲಿ ಕಾಣಬಹುದು. ಇಂದು ದೇಶದ ರಾಜಕೀಯ ಚಳವಳಿಯ ಅಗ್ರಭಾಗದಲ್ಲಿ ಬೆಳಗುವ ಮುಂದಾಳು ೧೯೧೪ರಲ್ಲೇನು ಮಾಡುತ್ತಿದ್ದರೆಂಬ ಸಂಗತಿಯು ಮೋಜಿನದೆನಿಸಬಹುದಲ್ಲವೇ? ೧೯೧೪ರಲ್ಲಿ ಅವರು ಮನೆಗೆ ಹಿಂತಿರುಗಿ ಬಂದರು. ಆಗ ಅವರ ತಾಯಿ-ತಂದೆಗಳಿಗೆ ಆದ ಆನಂದಕ್ಕೆ ಪಾರವೇ ಇರಲಿಲ್ಲ. ಸುಭಾಸರು ಆಗ ತಮ್ಮ ಗೆಳೆಯನೊಬ್ಬನಿಗೆ ಬರೆದ ಪತ್ರದಲ್ಲಿ ಮಾತ್ರ ಈ ರೀತಿ ಅಂದಿದ್ದಾರೆ, "ನನ್ನ ಜೀವನವನ್ನು ವಿಶಿಷ್ಟವಾದ ಕಾರ್ಯಕ್ಕಾಗಿ ಮೀಸಲಾಗಿರಿಸುವ ಆದೇಶವು ದೊರೆಯುತ್ತಿದೆಯೆಂದು ದಿನ-ದಿನಕ್ಕೂ ನನಗೆ ಮನವರಿಕೆಯಾಗತೊಡಗಿದೆ. ಆ ಕಾರ್ಯದ ಪೂರ್ತಿಗಾಗಿ ನನ್ನ ದೇಹವೂ ಪ್ರಾಣವೂ ಇವೆಯೆಂದು ನನಗನಿಸತೊಡಗಿದೆ. ಜನರ ಹೊಗಳಿಕೆ ತೆಗಳಿಕೆಗಳನ್ನು ನಾನು ಲೆಕ್ಕಿಸುವದಿಲ್ಲ. ಜಗತ್ತಿನ ನಿಯಮವೇ ಹೀಗಿದೆ. ನಾನು ನನ್ನ ಮಾರ್ಗ ಹಿಡಿದೇ ಹೋಗುವೆನು." ಈ ಮಾತಿನಲ್ಲಿ ರಹಸ್ಯವು ತುಂಬಿಕೊಂಡಿದೆ. ಧಾರ್ಮಿಕ

ಪ್ರವೃತ್ತಿಯ ಮೇಲೆ ದೇಶಭಕ್ತಿಯು ವಿಜಯವನ್ನು ಸಂಪಾದಿಸಿತು. ಆದರೆ ಮನಸ್ಸಿನ ಮೇಲಿನ ಹಾಗು ಬುದ್ಧಿಯ ಮೇಲಿನ ಗಾಢವಾದ ಧಾರ್ಮಿಕ ಸಂಸ್ಕಾರದ ಹಿಡಿತವು ಪೂರ್ಣವಾಗಿ ಹೋಯಿತೆಂದು ಅವರ ಆಯುಷ್ಯದ ಮುಂದಿನ ಭಾಗದಲ್ಲೇನೂ ಕಂಡಿಲ್ಲ!

## ಕಾಲೇಜದಿಂದ ಗಡಿಪಾರು

ಸುಭಾಷ ಬಾಬುಗಳ ವಿದ್ಯಾರ್ಥಿ ಜೀವನವು ಸುಸೂತ್ರವಾಗಿ ಸಾಗಲಿಲ್ಲ. ಅಡ್ಡತಿಡ್ಡ ನಡೆದಿತ್ತೆಂದು ಮೇಲಿನ ಸಂಗತಿಯಿಂದ ಸ್ಪಷ್ಟ ವಾಗಿ ತಿಳಿದು ಬರುತ್ತದೆ. ಹಿಮಾಲಯದಿಂದ ತಿರುಗಿ ಬಂದಮೇಲೆ ಆರೋಗ್ಯವು ಸುಧಾರಿಸಲಾಗಿ ಅವರು ಪ್ರೆಸಿಡೆನ್ಸಿ ಕಾಲೇಜದ ಪ್ರಥಮ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಆದರೆ ಆ ಕಾಲೇಜಿ ನಲ್ಲಿ ಇರುವ ಯೋಗವು ಅವರಿಗೆ ಇರಲಿಲ್ಲ. ಆ ಕಾಲೇಜಿನ ಯುರೋಪಿ ಯನ್ ಪ್ರಿನ್ಸಿಪಾಲರಾದ ಮಿ. ಓಟನ್‌ರು ಹಿಂದೀ ಜನರನ್ನು ಹೀಯಾಳಿ ಸುತ್ತಿದ್ದರು. ಹಿಂದೀ ಜನರ ನೀತಿಮತ್ತೆಯ ಬಗ್ಗೆ ಅನಾದರವನ್ನು ತೋರಿಸುತ್ತಿದ್ದರು. ಇದೇ ರೀತಿ ಹಿಂದುಸ್ತಾನದ ನಿಂದೆಯನ್ನೊಮ್ಮೆ ಮಾಡಿದರು. ವಿದ್ಯಾರ್ಥಿ ದೆಶೆಯಲ್ಲಿಯೇ ಮಾತೃಭೂಮಿಯ ಚರಣಾರ ವಿಂದಗಳಲ್ಲಿ ತಮ್ಮನ್ನು ಮುಡಿಪಾಗಿ ಅರ್ಪಿಸಿದ ಸುಭಾಷ ಬಾಬುಗಳಂಥ ತೇಜಸ್ವಿ ವಿದ್ಯಾರ್ಥಿಗಳಿಗೆ ಇದು ಸಹನವಾಗುವದುಂಟೇ? ಅವರು ಗುಪ್ತ ಸಭೆಯೊಂದನ್ನು ಕರೆದು ವಿದ್ಯಾರ್ಥಿಗಳನ್ನು ಹುರಿದುಂಬಿಸಿದರು. ಹರ ತಾಳವನ್ನು ಸಾರಿ ಕಾಲೇಜಿಗೆ ಬಹಿಷ್ಕಾರ ಹಾಕಿದರು. ಅದು ಯಶಸ್ವಿಯೂ ಆಯಿತು. ಕಾಲೇಜಿನ ವ್ಯವಸ್ಥಾಪಕ ಮಂಡಲದವರು ಹಾಗೂ ಹೀಗೂ ಮಾಡಿ ಈ ಪ್ರಕರಣವನ್ನು ಸಮಾಪ್ತಗೊಳಿಸಿದರು. ಮಿ. ಓಟನ್‌ರಿಗೆ ಎಚ್ಚರಿಗೆ ಕೊಡಲಾಯಿತು. ಆದರೆ ಮಿ. ಓಟನ್‌ರ ನಡೆವಳಿಕೆಯ ಡೊಂಕು ಬಾಲ ಡೊಂಕಾಗಿಯೇ ಉಳಿಯಿತು. ಅವರು ಮತ್ತೆ ಹಿಂದೀಯರ ಬಗ್ಗೆ ಅಪಮಾನಕಾರಕ ಮಾತನ್ನಾಡಿದರು. ಆ ಮೇಲೆ ಮಾತ್ರ ಗಲಭೆಯುಂ ಟಾಗಿ ಓಟನ್‌ರಿಗೆ ದೇಹ ದಂಡನೆಯಾಯಿತು, ಈ ಅಪಮಾನದ ರೊಚ್ಚಿ ನಿಂದ ಆ ಪ್ರಿನ್ಸಿಪಾಲರು ಸುಭಾಷಚಂದ್ರರನ್ನೂ ಅವರ ಸಹಕಾರಿಗಳನ್ನೂ ಎರಡು ವರ್ಷಗಳವರೆಗೆ ಕಾಲೇಜಿನಿಂದ ಹದ್ದುಪಾರು ಮಾಡಿದರು. ಈ ರೀತಿ ಸುಭಾಷರು ಮನೆಗೆ ಹಿಂತಿರುಗಿದರು. ಈ ಎರಡು ವರ್ಷದ ಅವಧಿ

ಯಲ್ಲಿ ಬಂಗಾಲೀ ತರುಣರ ಸಮೂಹದಲ್ಲಿದ್ದು ಯಾವ ಕಾರ್ಯವನ್ನು ಮಾಡಿದರೆಂಬುವದ ದಾಖಲೆಯಿಲ್ಲ. ಅವರ ಸ್ನೇಹಿತರು ಮಾತ್ರ ಆ ಕಾಲದ ಆಂದೋಲನದಲ್ಲಿ ಮುಖ್ಯರಾಗಿದ್ದರು. ಸುಭಾಷರು ತರುಣರ ಅಂತಃಕರಣದಲ್ಲಿದ್ದ ಉದ್ವೇಗದಲ್ಲಿ ಏಕರೂಪರಾಗಿದ್ದರು.

## ಆಯ್. ಸಿ. ಎಸ್. ದ ರಾಜೀನಾಮೆ

ಎರಡು ವರ್ಷಗಳ ನಂತರ ಸುಭಾಷ ಬಾಬುಗಳು ಕಲ್ಕತ್ತಾ ವಿದ್ಯಾಪೀಠದ ಸುಪ್ರಸಿದ್ಧ ವ್ಹಾಯಿಸ್ ಚಾನ್ಸಲರ್ ಶ್ರೀ ಆಶುತೋಷ ಮುಖರ್ಜಿಯವರ ಉಪದೇಶದ ಮೇರೆಗೆ ಅಲ್ಲಿಯ ಸ್ಕಾಟಿಷ್ ಚರ್ಚ ಕಾಲೇಜಿಗೆ ಹೆಸರು ಹಚ್ಚಿದರು. ೧೯೧೯ ರಲ್ಲಿ ವಿದ್ಯಾಪೀಠದ ಪದವೀ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ—ಆನರ್ಸನಲ್ಲಿ—ಪಾಸಾದರು. ತಾಯಿತಂದೆಗಳು ಆಯ್. ಸಿ. ಎಸ್. ಕಲಿಯಲು ಒತ್ತಾಯಪಡಿಸಹತ್ತಿದರು. ಅದಕ್ಕೆ ಸುಭಾಷ ಬಾಬುಗಳ ಮನಸ್ಸು ಇರಲಿಲ್ಲವಾದರೂ ಅವರ ಆಪ್ತಸ್ನೇಹಿತರೂ ಆಗ್ರಹ ಮಾಡಿದ್ದರಿಂದ ಆ ಪರೀಕ್ಷೆಗೆಂದು ಕೆಂಬ್ರಿಜ್‌ಗೆ ಪ್ರಯಾಣ ಬೆಳಸಿದರು. ತಾವು ಆ ಪರೀಕ್ಷೆಯಲ್ಲಿ ಪಾಸಾದದ್ದಾದರೆ ತಮ್ಮ ಧ್ಯೇಯ ದೃಷ್ಟಿಯನ್ನು ಬಿಡಬೇಕಾಗುವದೆಂದು ಗಾಬರಿಗೊಂಡು ಪತ್ರ ಬರೆದದ್ದು ಉಂಟು. ಮನಸ್ಸಿನ ಮೇಲೂ ನಡೆವಳಿಕೆಯ ಮೇಲೂ ಅವರ ಹಿಡಿತ ವಿದ್ದುದರಿಂದ ಹಾಗಾಗದಂತೆ ನೋಡಿಕೊಳ್ಳುವ ನಿಶ್ಚಯವನ್ನು ಮಾಡಿಕೊಂಡು ಚೆನ್ನಾಗಿ ಅಭ್ಯಾಸಮಾಡಿ ೧೯೨೦ರಲ್ಲಿ ಆಯ್. ಸಿ. ಎಸ್. ಪರೀಕ್ಷೆಯಲ್ಲೂ ತೇರ್ಗಡೆ ಹೊಂದಿದರು. ಮೊದಲೇ ನಿರ್ಧರಿಸಿದಂತೆ ತುಸು ದಿವಸಗಳಲ್ಲಿಯೇ ಅವರು ಆ ಕಾಲದ ಭಾರತ ಮಂತ್ರಿಗಳಾದ ಎಂ. ಮಾಂಟೆಗ್ಯೂರವರ ಕಡೆಗೆ ರಾಜೀನಾಮೆಯನ್ನು ಬರೆದುಕೊಟ್ಟರು!

“ನಾನು ಆಯ್. ಸಿ. ಎಸ್. ಆದುದೇನೋ ನಿಜ. ಆದರೆ ಎರಡು ಧ್ಯೇಯಗಳನ್ನು ಸಾಧಿಸುವ ಕಾರ್ಯವು ನನಗೆ ಶಕ್ಯವಿರಲಿಲ್ಲ. ನನ್ನ ಮಾತೃಭೂಮಿ ಮತ್ತು ಬ್ರಿಟಿಷ್ ಸರಕಾರ ಎರಡರ ಸೇವೆಯನ್ನೂ ಹೇಗೆ ತಾನೆ ಮಾಡಬಲ್ಲೆ? ೧೯೨೧ ರಲ್ಲಿ ನನ್ನ ಸ್ಥಳಕ್ಕೆ ನಾನು ರಾಜೀನಾಮೆ ಕೊಟ್ಟು ಭಾರತೀಯರು ಹೂಡಿದ ಆಂದೋಲನದಲ್ಲಿ ಭಾಗ ವಹಿಸುವದಕ್ಕೆಂದು ಹಿಂದುಸ್ತಾನಕ್ಕೆ ಹಿಂತಿರುಗಿ ಬಂದೆ.” ೧೯೨೧ ನೇ ಜುಲೈ ತಿಂಗಳಲ್ಲಿ ಸುಭಾಸರು ಬೊಂಬಾಯಿಗೆ ಬಂದಿಳಿದರು. ಅದೇ ದಿವಸ

ಗಾಂಧೀಜಿಯವರ ಸಂದರ್ಶನವೂ ಅವರಿಗೆ ಲಭಿಸಿತು. ಇವರಿಬ್ಬರ ವಿಚಾರಗಳು ಮೇಳುಗೂಡುವಂತಿರಲಿಲ್ಲ. "ಗಾಂಧೀಜಿಯವರ ಕಾರ್ಯ ಕ್ರಮದಲ್ಲಿ ನಿಶ್ಚಿತತನ ಕಾಣುವದಿಲ್ಲ. ಧ್ಯೇಯವನ್ನು ಸಾಧಿಸುವದಕ್ಕಾಗಿ ಒಂದಾದಮೇಲೆ ಮತ್ತೊಂದು ಯೋಜನೆ ಕೈಕೊಳ್ಳಬೇಕೆಂಬುದು ನನ್ನ ವಿಚಾರ. ಆದರೆ ಗಾಂಧೀಜಿಯವರಲ್ಲಿ ಆ ನಿರ್ಧಾರ ನನಗೆ ಕಾಣಲಿಲ್ಲ" ಎಂದು ಸುಭಾಷರು ಬರೆದಿದ್ದಾರೆ. ಮುಂದೆ ಅವರು ಕಲಕತ್ತೆಗೆ ಹೋದ ಬಳಿಕ ದೇಶಬಂಧು ಚಿತ್ತರಂಜನದಾಸರ ಮುಖ್ಯ ಕಾರ್ಯದರ್ಶಿಗಳಾದರು.

## ಪ್ರಥಮ ಕಾರಾವಾಸ

ದೇಶಬಂಧು ದಾಸ ಮತ್ತು ಸುಭಾಸಚಂದ್ರರ ಜೊತೆ ಕೂಡಿದ ಕಾಲವು ಹಿಂದುಸ್ತಾನದ ಇತಿಹಾಸದಲ್ಲಿ ಮಹತ್ವದ್ದಾಗಿತ್ತು. ಸುಭಾಸ ಬಾಬುಗಳು ಲಷ್ಕರೀ ಶಿಸ್ತಿನ ಅನುಯಾಯಿಗಳೂ ಮುಂದಾಳುಗಳೂ ಆಗಿದ್ದರು. ಕಾಲೇಜದಲ್ಲಿ ಬಿ. ಎ. ಆಗುವ ಮೊದಲು "ಯುನಿವರ್ಸಿಟಿ ಟ್ರೇನಿಂಗ ಕೋರ್"ದಲ್ಲಿ ಲಷ್ಕರೀ ಶಿಕ್ಷಣವನ್ನು ಪಡೆದಿದ್ದರು. ಅಂದಿನಿಂದಲೇ ಲಷ್ಕರೀ ಶಿಸ್ತಿನ ಮಹತ್ವವು ಅವರ ಮನಸ್ಸಿನಲ್ಲಿ ಬಿಂಬಿಸಿದ್ದಿತು. ದಾಸ ಬಾಬುಗಳಿಗೂ ಸುಭಾಸರ ಕರ್ತೃತ್ವಶಾಲಿ ಗುಣದ ಬಗ್ಗೆ ಅಭಿಮಾನವೆನಿಸುತ್ತಿದ್ದಿತು. ಇವರಿಬ್ಬರೂ ಬಂಗಾಲದ ಚಳವಳಿಯಲ್ಲಿ ಎದ್ದು-ಕಾಣುತ್ತಿದ್ದರು. ಪ್ರಿನ್ಸ್ ಆಫ್ ವೇಲ್ಸರು ಡಿಸೆಂಬರ್ ೨೪ಕ್ಕೆ ಕಲಕತ್ತೆಗೆ ಬರತಕ್ಕವರಿದ್ದರು. ಕಾಂಗ್ರೆಸ್ಸು ಅವರ ಆಗಮನದ ಮೇಲೆ ಬಹಿಷ್ಕಾರವನ್ನು ಸಾರಿತು. ದಾಸರು ಬಂಗಾಲದಲ್ಲಿ ಮುಂದಾಳುತ್ವವನ್ನು ವಹಿಸಿಕೊಂಡರು. ಸುಭಾಸ ಬಾಬುಗಳು ಒಂದು ದೊಡ್ಡ ಸ್ವಯಂ ಸೇವಕ ದಳವನ್ನು ಸ್ಥಾಪಿಸಿ, ಅದರ ಮುಖಾಂತರ ಈ ಬಹಿಷ್ಕಾರದ ಕಾರ್ಯವನ್ನು ಯಶಸ್ವಿಯಾಗಿ ಮಾಡಿದರು. ಬಹಿಷ್ಕಾರವನ್ನು ಕುರಿತು ನಿತ್ಯವೂ ನಡೆದ ಸಭೆ, ಮೆರವಣಿಗೆಗಳನ್ನು ಕಂಡು ಸರಕಾರಕ್ಕೆ ಧಕ್ಕೆ ತಗಲಿದ್ದರೇನಾಶ್ಚರ್ಯ? ದಾಸ ಬಾಬುಗಳಿಗೆ ಮುಂದಿನ ಕೈಸೆರೆಯ ವಿಚಾರ ಕಂಡುಬಾರದಿರಲಿಲ್ಲ. ಅವರು ಸಂದೇಶವನ್ನು ಕೊಟ್ಟರು. "ನನ್ನ ಭಾವೀ ಕೈಕಡಗಗಳು, ಸರಪಳಿಗಳು ಇಂದೇ ಕಾಣುತ್ತಿವೆ. ಅಖಿಲ ದೇಶವೇ ತುರಂಗವಾಗಿರುವಾಗ ನಾನು ಕೈದಿಯಾಗಿದ್ದರೇನು, ಸ್ವತಂತ್ರನಾಗಿದ್ದರೇನು, ಜೀವಿಸಿದ್ದರೇನು ಎಲ್ಲವೂ ಒಂದೇ ಅಲ್ಲವೇ? ನಿಮ್ಮ

ಕಾರ್ಯವು ಸಾಗಲಿ" ದಾಸರ ಮಾತು ಸುಳ್ಳಾಗಲಿಲ್ಲ. ಮುಂದಾಳುಗಳೆಲ್ಲ ಕೈದು ಮಾಡಲ್ಪಟ್ಟರು. ಸುಭಾಸಚಂದ್ರರಿಗೂ ಆರು ತಿಂಗಳ ಶಿಕ್ಷೆಯಾಯಿತು. "ಇದೇನು ಮಹಾ?'' ಎಂದಂದು ಜೇಲಿಗೆ ಹೊರಟು ಹೋದರು.

## ಎರಡನೇ ಕಾರಾವಾಸ ಮತ್ತು ಗಡಿಪಾರು

ಸುಭಾಸ ಬಾಬುಗಳ ಸ್ಥಾನವು ಈ ರಾಷ್ಟ್ರೀಯ ಅಂದೋಲನದಲ್ಲಿ ಪ್ರಥಮ ಕಾರಾವಾಸವಾದನಂತರ ನಿಶ್ಚಿತವಾಯಿತು. ಅವರು ಬಿಡುಗಡೆಯಾಗಿ ಬಂದ ಸುಮಾರಿಗೆ ಉತ್ತರ ಬಂಗಾಲದಲ್ಲಿ ಮಹಾಪೂರದಿಂದ ತುಂಬ ಅನರ್ಥವಾಗಿತ್ತು. ಸುಭಾಸ ಬಾಬುಗಳು ಸ್ವಯಂಸೇವಕರ ಸಂಘಟನೆಮಾಡಿ ಅದರ ಮೂಲಕ ತುಂಬ ಸಹಾಯವನ್ನು ನೀಡಿ ಜನತೆಯ ಹೃದಯದಲ್ಲಿ ಅಧಿಷ್ಠಾನವನ್ನು ಪಡೆದರು. ೧೯೨೨ರ ಕೊನೆಗೆ ಗಯಾದಲ್ಲಿ ಕೂಡಿದ ಅ. ಭಾ. ರಾಷ್ಟ್ರೀಯ ಮಹಾಸಭೆಗೆ ದೇಶಬಂಧು ದಾಸರು ಅಧ್ಯಕ್ಷರಾಗಿದ್ದರು. ಆಗ ಕೌನ್ಸಿಲ್ ಪ್ರವೇಶದ ಬಗ್ಗೆ ತಿಕ್ಕಾಟವುಂಟಾಗಿತ್ತು. ಗಾಂಧೀಜಿಯವರು ತುರಂಗದಲ್ಲಿದ್ದುದರಿಂದ ಅವರ ಖಾಸ ಅನುಯಾಯಿಗಳು ಚರ್ಚೆ ಮಾಡಿ ಕೌನ್ಸಿಲ್ ಬಹಿಷ್ಕಾರವನ್ನೇ ಎತ್ತಿ ಹಿಡಿದರು. ದಾಸ ಬಾಬುಗಳಿಗೆ ಇದು ಸರಿದೋರಲಿಲ್ಲ. ಅಧ್ಯಕ್ಷಪದಕ್ಕೆ ರಾಜೀನಾಮೆಯನ್ನೇ ಕೊಟ್ಟುಬಿಟ್ಟರು. "ಸ್ವರಾಜ್ಯಪಕ್ಷ''ವೆಂಬ ಬೇರೊಂದು ಪಕ್ಷವನ್ನು ಸ್ಥಾಪಿಸಿದರು. ಸುಭಾಸ ಬಾಬುಗಳು ಅವರ ಮುಖ್ಯ ಕಾರ್ಯದರ್ಶಿಗಳಾಗಿದ್ದರು. ತಮ್ಮ ಪಕ್ಷದ ಪ್ರಚಾರಕ್ಕೆಂದು "ಫಾವರರ್ಡ್''ಯೆಂಬ ದಿನಪತ್ರಿಕೆಯೊಂದನ್ನು ತೆಗೆದರು. ಸುಭಾಸ ಬಾಬುಗಳು ಅದರ ಸಂಪಾದಕರಾದರು. ಚುನಾವಣೆಯಲ್ಲಿ ಸ್ವರಾಜ್ಯ ಪಕ್ಷವು ಗೆದ್ದ ಶ್ರೇಯವು ಸುಭಾಸ ಬಾಬುಗಳ ಸಂಘಟನೆ, ಪ್ರಚಾರ ಕಾರ್ಯ ಇವುಗಳಿಗೇ ಸಲ್ಲುವದು. ೧೯೨೪ರಲ್ಲಿ ದಾಸ ಬಾಬುಗಳು ಕಲಕತ್ತಾ ಕಾರ್ಪೋರೇಶನ್ ಚುನಾವಣೆಯಲ್ಲಿ ಹೋರಾಡಿದರು. ಜಯವನ್ನೂ ಪಡೆದರು. ದಾಸ ಬಾಬುಗಳು ''ಮೇಯರ್" ಆದರು. ಸುಭಾಸರು 'ಚೀಫ್ ಆಫೀಸರ್' ಆದರು. ಆಗ ಅವರ ವಯಸ್ಸು ಬರೀ ಇಪ್ಪತ್ತಾರಾಗಿತ್ತು. ಸರಕಾರದ ಮನಸ್ಸಿನಲ್ಲಿರದಿದ್ದರೂ ಈ ಕ್ರಾಂತಿ

ಕಾರೀ ತರುಣನ ಆಯ್ಕೆಗೆ ಕಾಯ್ದೆಗನುಸರಿಸಿ ಮಾನ್ಯತೆ ಕೊಡಬೇಕಾಯಿತು. ಸುಭಾಸ ಬಾಬುಗಳು ಕಾರ್ಪೊರೇಶನ್ನಿನ ಕಾರಭಾರದಲ್ಲಿ ತುಂಬ ಸುಧಾರಣೆಯನ್ನು ಮಾಡಿದರು. ಆ ಸಂಸ್ಥೆಗೆ ಸ್ವದೇಶೀ ಸ್ವರೂಪವನ್ನು ಕೊಟ್ಟರು. ಹೊರಗಡೆಗೂ ತುಂಬ ಸಂಘಟನೆ ಮಾಡಿದರು. ಸರಕಾರಕ್ಕೆ ಇದನ್ನು ಕಂಡು ಕಸಿವಿಸಿಯಾಗುತ್ತಿತ್ತು. ಆರು ತಿಂಗಳು ಮಾತ್ರ ಇವರು ಚೀಫ್ ಆಫೀಸರರಾಗಿದ್ದರು. ಆಗ ಬಂಗಾಲದಲ್ಲಿ ತಾರಕೇಶ್ವರವೆಂಬಲ್ಲಿ ಸತ್ಯಾಗ್ರಹವು ನಡೆದಿತ್ತು. ಕ್ರಾಂತಿಕಾರರ ಗಲಾಟೆಯೂ ಹೆಚ್ಚಾಗಿತ್ತು. ಸುಭಾಸ ಬಾಬುಗಳು ಅಧ್ಯಕ್ಷರಿದ್ದ ವಿದ್ಯಾರ್ಥಿ ಸಂಘದಲ್ಲಿ ಮೂರು ಲಕ್ಷ ಸದಸ್ಯರಿದ್ದರು ! ೨೪ನೇ ಅಕ್ಟೋಬರ್ ೧೯೨೪ರ ಸಂಜೆಗೆ ವ್ಹಾಯಿಸ್‌ರಾಯರೊಂದು ಆರ್ಡಿನನ್ಸು ತೆಗೆದರು. ೨೫ನೇ ತಾರೀಖಿನ ಬೆಳಗಿನಲ್ಲಿಯೇ ಸುಭಾಸರ ಕೈಸೆರೆಯಾಯಿತು. ಅವರು ಕ್ರಾಂತಿಕಾರರ ಚಳವಳಿಯ ಸೂತ್ರಧಾರರೆಂದೂ ಮಾರ್ಗದರ್ಶಕರೆಂದೂ ಆಂಗ್ಲೋ ಇಂಡಿಯನ್ ವೃತ್ತಪತ್ರಿಕೆಯವರು ಆರೋಪ ಮಾಡತೊಡಗಿದರು. ದಾಸ ಬಾಬುಗಳು ಮೇಯರ್ ಎಂಬ ಅಧಿಕಾರವಾಣಿಯಿಂದ ಹೇಳಿದರು, “ ಸುಭಾಸ ಬಾಬುಗಳು ಆರೋಪಿತರಾಗಿದ್ದರೆ ನಾನೂ ಅಷ್ಟೇ ಅಪರಾಧಿಯಾಗಿದ್ದೇನೆ. ನನ್ನನ್ನು ಕೈದು ಮಾಡಿರಿ.” ಇದರ ಪರಿಣಾಮವು ವಿಲಕ್ಷಣವಾಯಿತು. ಅಲೀಗಡ–ಬರ್ಹಾಣಪುರ ಸೆರೆಮನೆಗಳಲ್ಲಿ ಇವರನ್ನು ಮೂರು ತಿಂಗಳು ಇಟ್ಟು ಬಿಟ್ಟುಕೊಟ್ಟರು. ಆದರೆ ಮತ್ತೆ ಬೇಗನೆ ತಾ. ೨೫ನೇ ಜನೆವರಿ ೧೯೨೫ಕ್ಕೆ ಇವರನ್ನೂ ಇವರ ಏಳು ಸಹಕಾರಿಗಳನ್ನೂ ಕೈದು ಮಾಡಿ ಮಂಡಾಲೆ ತುರಂಗಕ್ಕೆ ಕಳಿಸಿಕೊಟ್ಟರು. “ ಲೋಕಮಾನ್ಯ ಟಿಳಕರು ಪವಿತ್ರವನ್ನಾಗಿ ಮಾಡಿದ ಮಂಡಾಲೆ ಸೆರೆಮನೆಗೆ ಹೋಗುವ ಭಾಗ್ಯವು ತಮಗೆ ದೊರೆಯಿತು ” ಎಂದು ಸುಭಾಸರು ಹೆಮ್ಮೆಪಟ್ಟಿದ್ದಾರೆ.

## ಆರೋಗ್ಯ ಕೆಟ್ಟಿತು

೧೯೨೫ ರಿಂದ ೧೯೨೭ ರ ವರೆಗೆ ಮೂರು ವರ್ಷ ಮಂಡಾಲೆ ಮತ್ತು ರಂಗೂನ ಸೆರೆಮನೆಗಳಲ್ಲಿದ್ದರು. ೧೯೨೫ನೇ ಅಕ್ಟೋಬರ್‌ದಲ್ಲಿ ಮಂಡಾಲೆಯಲ್ಲಿದ್ದಾಗ ಸತ್ಯಾಗ್ರಹ ಮಾಡಿ ದುರ್ಗಾ ಪೂಜೆಮಾಡುವ ಪರವಾನಿಗೆಯನ್ನು ಪಡೆದರು. ಮುಂದೆ ಮಂಡಾಲೆಯಲ್ಲಿರುವಾಗಲೇ ಅವರು ಮತ್ತು

ಅವರ ಅನುಯಾಯಿಗಳಾದ ಶ್ರೀ. ಎಸ್. ಪಿ. ಮಿತ್ರರು ಪ್ರಾಂತಿಕ ಕಾರ್ಯಮಂಡಲದಲ್ಲಿ ಆರಿಸಿ ಬಂದರು. ಅವರ ಬಿಡುಗಡೆಯಾಗದ್ದರಿಂದ ಆರಿಸಿ ಬಂದೂ ನಿರರ್ಥಕವಾಯಿತು. ಆದರೆ ಜನತೆಯ ಪ್ರೇಮವು ಎಷ್ಟೊಂದು ಗಾಢವಾದದ್ದಿತ್ತೆಂಬುದು ಮಾತ್ರ ಬೆಳಕಿಗೆ ಬಾರದೆ ಇರಲಿಲ್ಲ. ಕಾರಾವಾಸದಲ್ಲಿ ಸುಭಾಸ ಬಾಬುಗಳ ಮೈಕಟ್ಟು ಶಿಥಿಲವಾಯಿತು. ಪುಪ್ಪುಸ ರೋಗವು ಗಂಟು ಬಿದ್ದಿತು. ನಲವತ್ತು ಪೌಂಡು ತೂಕ ಕಡಿಮೆಯಾಯಿತು. ಈ ಕಾರಣಕ್ಕಾಗಿ ೧೯ ಮೇ ೧೯೨೭ ಕ್ಕೆ ಅವರ ಬಿಡುಗಡೆಯಾಯಿತು. ಅಷ್ಟೊತ್ತಿಗೆ ದಾಸ ಬಾಬುಗಳು ದಿವಂಗತರಾದುದರಿಂದ ಈ ಗುರುಶಿಷ್ಯರ ಮಿಲನವಾಗಲಿಲ್ಲ.

## ಸ್ವತಃ ಸೂತ್ರಧಾರರಾದರು

ಆ ಮೇಲೆ ಸುಭಾಸ ಬಾಬುಗಳು ಸ್ವತಃ ನೇತೃತ್ವವನ್ನು ವಹಿಸಿ ಚಳವಳಿ ನಡೆಸುತ್ತಿದ್ದರು. ೧೯೨೭ ರಲ್ಲಿ ಮದ್ರಾಸದಲ್ಲಿ ಸೇರಿದ ಅ. ಭಾ. ಕಾಂಗ್ರೆಸ್ ಅಧಿವೇಶನದಲ್ಲಿ ಅವರನ್ನೂ ಪಂಡಿತ ಜವಾಹರಲಾಲರನ್ನೂ ಗೌರವ ಕಾರ್ಯದರ್ಶಿಗಳನ್ನಾಗಿ ನಿಯಮಿಸಲಾಗಿತ್ತು. ಸುಭಾಸ ಬಾಬುಗಳ ಮುಂದಿನ ಕಾರ್ಯಕ್ರಮಗಳು ಸ್ಪಷ್ಟವಾದವುಗಳೂ ನಿಶ್ಚಿತವಾದವುಗಳೂ ಆಗಿದ್ದವು. ಸಂಪೂರ್ಣ ಸ್ವರಾಜ್ಯದ ಬೇಡಿಕೆ ಮತ್ತು ಅದನ್ನು ದೊರಕಿಸುವದಕ್ಕಾಗಿ ಸಂಘಟನೆ ಇದು ಅವರ ಸೂತ್ರವಾಗಿದ್ದಿತು. ೧೯೨೮ ರಲ್ಲಿ ಅನೇಕ ಘಟನೆಗಳು ಸಂಭವಿಸಿದವು. ನೆಹರೂ ಕಮಿಟಿಯ ರಿಪೋರ್ಟು ಸಿದ್ಧವಾಯಿತು. ಎಲ್ಲ ಪಕ್ಷಪಂಗಡಗಳ ಪರಿಷತ್ತು ಸೇರಿದ್ದಾಯಿತು. ಇವೆಲ್ಲವುಗಳ ಧ್ಯೇಯ 'ಡೋಮಿನಿಯನ್ ಸ್ಟೇಟಸ್' ಆಗಿದ್ದಿತು. ಸುಭಾಸ ಬೋಸರೂ ಪಂ. ಜವಾಹರಲಾಲರೂ ಅದಕ್ಕೆ ಪ್ರತಿಯಾಗಿ 'ಇಂಡಿಪೆಂಡೆನ್ಸ ಲೀಗ್' ವನ್ನು ತೆಗೆದರು. ಸಾಯಮನ್ ಕಮಿಶನ್ ಬಂದಿತು. ೧೯೨೮ರಲ್ಲಿ ಪುಣೆಯಲ್ಲಿ ಸೇರಿದ ಪ್ರಾಂತಿಕ ಸಮ್ಮೇಲನಕ್ಕೆ ಸುಭಾಸರು ಅಧ್ಯಕ್ಷರಾಗಿದ್ದರು. ಅದೇ ಕಾಲಕ್ಕೆ ಸುಭಾಸರು ಸಂಪು ಹೂಡುವ, ಕರನಿರಾಕರಣೆ ಮಾಡುವ ಚಳವಳಿಯನ್ನು ಆರಂಭಿಸಬೇಕೆಂದು ಮಹಾತ್ಮರೊಡನೆ ವಿಚಾರವಿನಿಮಯ ಮಾಡಿದರು. ಆದರೆ "ಬೆಳಕು ಕಾಣುವದಿಲ್ಲ"ವೆಂದು ಮಹಾತ್ಮರು ಉತ್ತರ ಕೊಟ್ಟರು.

ಇಲ್ಲವಾಗಿದ್ದರೆ ೧೯೩೦ರಲ್ಲಿ ಆದ ಸತ್ಯಾಗ್ರಹವು ಆಗಲೇ ಆಗಬಹುದಿತ್ತು. ೧೯೨೮ರ ಕೊನೆಗೆ ಕಲಕತ್ತೆಯಲ್ಲಿ ಕೂಡಿದ ಕಾಂಗ್ರೆಸ್ ಅಧಿವೇಶನದಲ್ಲಿ ಮುಖ್ಯ ಠರಾವಿಗೆ "ಸಂಪೂರ್ಣ ಸ್ವಾತಂತ್ರ್ಯದ ಹೊರತು ಹಿಂದುಸ್ತಾನಕ್ಕೆ ಸಮಾಧಾನವಾಗದು" ಯೆಂಬ ಉಪಸೂಚನೆಯನ್ನು ತಂದರು. ಆದರೆ ಅದು ಮಾನ್ಯವಾದರೆ ಗಾಂಧೀಜಿಯವರು ಕಾಂಗ್ರೆಸ್ಸನ್ನೆಲ್ಲಿ ಬಿಡುವರೊ ಎಂಬ ಗುಲ್ಲು ಎದ್ದು ೯೭೩ ವಿರುದ್ಧ ೧೩೫ ಮತಗಳಿಂದ ಅದು ಅಮಾನ್ಯವಾಯಿತು. ಈ ಉಪಸೂಚನೆಗೆ ಜವಾಹರಲಾಲರು ಸುಂದರ ಭಾಷಣ ಮಾಡಿ ಪುಷ್ಟಿ ಕೊಟ್ಟಿದ್ದರು. ೧೯೨೧ ರಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನದಲ್ಲಿ ಸುಭಾಸ ಬಾಬುಗಳು "ಸ್ವತಂತ್ರ ಸರಕಾರ" ವನ್ನು ಸ್ಥಾಪಿಸುವ ಬಗ್ಗೆ ಉಪಸೂಚನೆ ತಂದಿದ್ದರು. ಅದೂ ಅಮಾನ್ಯವಾಯಿತು. ಅಂದಿನಿಂದ ಕಾಂಗ್ರೆಸ್ಸಿನಲ್ಲಿ ಮಂದ ಮತ್ತು ಉಜ್ವಲ ಎಂಬ ಎರಡು ಪಕ್ಷಗಳು ಉತ್ಪನ್ನವಾಗಿದ್ದವು. ಉಜ್ವಲ ಪಕ್ಷದವರು "ಕಾಂಗ್ರೆಸ್ ಡೆಮಾಕ್ರೆಟಿಕ್ ಪಾರ್ಟಿ" ಯನ್ನು ಸ್ಥಾಪಿಸಿದರು. ಆದರೆ ಅಷ್ಟರಲ್ಲೇ ಸುಭಾಸ ಬಾಬುಗಳನ್ನು ಕೈದು ಮಾಡಿದ್ದರಿಂದ ಅದು ಅಲ್ಲಿಯೇ ಉಳಿಯಿತು. ೧೯೩೦ ರಲ್ಲಿ ಬಿಡುಗಡೆ ಆಯಿತೆನ್ನುವಷ್ಟರಲ್ಲಿಯೇ ೧೯೩೧ನೇ ಜನೆವರಿಯಲ್ಲಿ ಮತ್ತೆ ಹಿಡಿಯಲ್ಪಟ್ಟರು.

## ಮತ್ತೆ ಮತ್ತೆ ಬಂದಿವಾಸ

ಆ ಬಳಿಕ ಸುಭಾಸಚಂದ್ರರು ಕಲ್ಕತ್ತಾ ಕಾರ್ಪೋರೇಶನ್ನಿನ ಮೇಯರರಾಗಿ ಆರಿಸಲ್ಪಟ್ಟರು. ಹಿಂದೆ ಚೀಫ್ ಆಫೀಸರ್ ಆಗಿದ್ದವರಿಗೆ ಈಗ ಶ್ರೇಷ್ಠ ಪದ ದೊರೆಯಿತು. ಸ್ವಾತಂತ್ರ್ಯ ದಿನದ ನಿಮಿತ್ತ ಹೊರಡಿಸಿದ ಮೆರವಣಿಗೆಯ ಬಗ್ಗೆ ಅವರಿಗೆ ಮತ್ತೆ ಬಂಧನವಾಯಿತು. ಗಾಂಧೀ-ಆಯರ್ವಿನ್ ಒಪ್ಪಂದವಾದಾಗ ಬಿಡಲ್ಪಟ್ಟರು. ೧೯೩೨ ರಲ್ಲಿ ಗಾಂಧೀಜಿಯವರು ದುಂಡುಮೇಜಿನ ಪರಿಷತ್ತಿನಿಂದ ನಿರಾಶರಾಗಿ ಹಿಂತಿರುಗಿ ಬಂದರು. ಆ ದಿವಸ ಸುಭಾಸರನ್ನು ವಿಚಾರವಿನಿಮಯಕ್ಕಾಗಿ ಆಮಂತ್ರಿಸಿದರು. ಆದರೆ ಸರಕಾರದವರೇ ೧೮೧೮ರ ಮೂರನೇ ಕಾನೂನಿನಂತೆ ಇವರಿಗೆ ಆಮಂತ್ರಣ ಕಳಿಸಿ ಕಾರಾಗೃಹಕ್ಕೆ ಕರೆದೊಯ್ದರು. ೧೯೩೩ ರಲ್ಲಿ ಅವರನ್ನು ಬಂಧಮುಕ್ತಮಾಡಿ ಆರೋಗ್ಯ ಸುಧಾರಣೆಗೆಂದು ಒತ್ತಾಯ

ದಿಂದ ಯುರೋಪಿಗೆ ಕಳಿಸಿಕೊಟ್ಟರು. ಈ ಅವಧಿಯಲ್ಲಿ ಇವರಿಗೂ ವಿಠ್ಠಲ ಭಾಯಿ ಪಟೇಲರಿಗೂ ಗಾಢ ಸ್ನೇಹ ಬೆಳೆಯಿತು. ಜಹಾಲ ಪಕ್ಷದ ಧ್ಯೇಯ ವಾದದ ಬಗ್ಗೆ ಇವರಿಬ್ಬರೂ ಕೂಡಿ ತೆಗೆದ ಪ್ರಕಟನೆ ಪ್ರಸಿದ್ಧವಾಗಿತ್ತು. ಅದೇ ಸುಮಾರಿಗೆ ಸುಭಾಸ ಬಾಬುಗಳು ' ಸ್ಟ್ರಗಲ್ 'ಯೆಂಬ ಪುಸ್ತಕ ವನ್ನೂ ಬರೆದಿದ್ದಾರೆ. ಅವರ ತಂದೆಯವರಿಗೆ ಕಾಯಿಲೆಯಾದ ಸಮಾಚಾರ ತಿಳಿದು ಸುಭಾಸರು ೧೯೩೪ ರಲ್ಲಿ ಸರಕಾರದ ಅಪ್ಪಣೆ ಪಡೆಯದೆ ವಿಮಾನ ದಿಂದ ಕಲ್ಕತ್ತೆಗೆ ಬಂದರು. ತಂದೆ ತೀರಿಕೊಂಡರು. ಮತ್ತೆ ಇವರನ್ನು ೧೮೧೮ರ ಮೂರನೇ ಕಾನೂನಿನಂತೆ ಕೈದು ಮಾಡಿ ಯುರೋಪಕ್ಕೆ ಕಳಿಸಿ ದರು. ೧೯೩೬ರ ವರೆಗೂ ಅವರು ಅಲ್ಲಿ ಇದ್ದರು. ೧೯೩೬ ರಲ್ಲಿ ಲಖನೌ ಕಾಂಗ್ರೆಸ್ಸಿಗೆಂದು ಪುನಃ ಬಂದರು. ಬರುವದೊಂದೇ ತಡ; ಸರಕಾರದವರು ಅವರನ್ನು ಯರವಡಾ ಜೇಲಿಗೆ ಅಟ್ಟಿದರು. ೧೯೩೭ರಲ್ಲಿ ಅವರ ಬಿಡುಗಡೆ ಯಾಯಿತು. ಕಾಹಿಲೆಯಿಂದ ಬಳಲುತ್ತಿದ್ದರಾದ್ದರಿಂದ ಈ ಸಲ ತಾವಾಗಿ ಯುರೋಪಿಗೆ ಪ್ರಯಾಣ ಬೆಳಿಸಿದರು,

## ಎರಡು ಸಲ ಕಾಂಗ್ರೆಸ್ ಅಧ್ಯಕ್ಷಪದ

ಹರಿಪುರ ಕಾಂಗ್ರೆಸ್ಸಿಗೆ ಅಧ್ಯಕ್ಷರೆಂದು ಸುಭಾಸರ ಆಯ್ಕೆಯಾದ್ದರಿಂದ ಅವರು ೧೯೩೮ನೇ ಜನೆವರಿ ೧೪ಕ್ಕೆ ವಿಮಾನದಿಂದ ಹಿಂದುಸ್ಥಾನಕ್ಕೆ ಬಂದರು. ಅವರಿಗೆ ಎಲ್ಲೆಲ್ಲಿಯೂ ಸ್ವಾಗತವೇ ಸ್ವಾಗತ! ಒಂದು ವರ್ಷ ಯಾವ ಮತಭೇದವೂ ಇಲ್ಲದೆ ಕಾರ್ಯ ಸಾಂಗವಾಯಿತು. ೧೯೩೯ರಲ್ಲಿ ಕಾಂಗ್ರೆಸ್ಸು ತ್ರಿಪುರಿಯಲ್ಲಿ ಸೇರುವದಿತ್ತು. ಆಗ ಒಳ್ಳೇ ಉಗ್ರ ಕಾರ್ಯಕ್ರಮ ಗಳನ್ನು ಏರ್ಪಾಟು ಮಾಡಬೇಕೆಂದು ಸುಭಾಸರು ಯತ್ನಿಸುತ್ತಿದ್ದರು. ಆದರೆ ಬಲ ಪಕ್ಷದವರು ಅದನ್ನು ವಿರೋಧಿಸುತ್ತಿದ್ದರು. ಸುಭಾಸರು ತಾವಾಗಿ ಮತ್ತೆ ಅಧ್ಯಕ್ಷಪದ ಚುನಾವಣೆಗೆ ನಿಂತರು. ಆರಿಸಿಯೂ ಬಂದರು. ಗಾಂಧೀಜೀಯವರು ತ್ರಿಪುರಿಗೆ ಹೋಗಲಿಲ್ಲ. ತುಂಬ ಕಾಹಿಲೆಯವರಾಗಿದ್ದರೂ ಸುಭಾಸರು ಎದೆಗುಂದದೆ ಕಾಂಗ್ರೆಸ್ ಅಧಿವೇಶನದ ಕಾರ್ಯವನ್ನು ಜರು ಗಿಸಿದರು. ಅನೇಕ ಮತಭೇದಗಳೂ ಉಂಟಾದವು. ಮುಂದೆ ಎಪ್ರಿಲ್ ೨೮ಕ್ಕೆ ಕೂಡಿದ ಎ. ಆಯ್. ಸಿ. ಸಿ. ಯಲ್ಲಿ ಅವರು ತಮ್ಮ ಅಧ್ಯಕ್ಷ ಪದಕ್ಕೆ

ರಾಜೀನಾಮೆಯನ್ನು ಕೊಟ್ಟರು. ಆದರೂ ಅವರು ಸುಮ್ಮಗುಳಿಯಲಿಲ್ಲ. "ಫಾರವರ್ಡ ಬ್ಲಾಕ" ಪಕ್ಷವನ್ನು ಸ್ಥಾಪಿಸಿ ದೇಶದ ತುಂಬ ಪ್ರಚಾರ ಮಾಡಿದರು. ಮುಂದೆ ಅವರು ಬಂಗಾಲ ಶಾಸನ ಸಭೆಯಲ್ಲಿ ಆರಿಸಿ ಬಂದರು. ಕಲಕತ್ತೆಯಲ್ಲಿಯ ಹಾಲ್‌ವೆಲ್‌ನ ಪುತ್ಥಳಿಯನ್ನು ತೆಗೆದು ಹಾಕಬೇಕೆಂದು ಚಳವಳಿ ನಡೆಸಿದ್ದರಿಂದ ಇವರು ಮತ್ತೆ ಬಂಧಿಸಲ್ಪಟ್ಟರು. ಭಾರತ ಸಂರಕ್ಷಣ ಕಾಯ್ದೆಯ ಮೇರೆಗೆ ಇವರಿಗೆ ಒಂದು ಆಕ್ಷೇಪಾರ್ಹ ಲೇಖನದ ಬಗ್ಗೆ ಹಾಗು ಭಾಷಣದ ಬಗ್ಗೆ ಮತ್ತೂ ಒಂದು ವಾರಂಟು ಸಿದ್ಧವಾಯಿತು. ಇದೇ ಬಂಧನದಲ್ಲಿಂದ ಅವರು ೨೬ನೇ ಜನವರಿ ೧೯೪೧ ರಲ್ಲಿ ಮಾಯ ವಾದದ್ದು !!

## ರಾಷ್ಟ್ರಕ್ಕೆ ಸಂದೇಶ

ಈ ನಂತರದ ಸುಭಾಸಚಂದ್ರ ಬೋಸರ ಚರಿತ್ರೆಯ ಮೇಲೆ ಬಿದ್ದ ಪರದೆಯನ್ನು ಇತಿಹಾಸವು ತಾನಾಗಿ ತೆರೆದು ತೋರಿಸಬಹುದು. ಗಾಂಧೀಜಿ-ಸುಭಾಸರಲ್ಲಿ ಮತಭೇದಗಳಿದ್ದರೂ ಕೇವಲ ಧ್ಯೇಯವಾದ ಹಾಗು ಮಾರ್ಗ ಗಳಲ್ಲಿಯ ಜಹಾಲ ವೃತ್ತಿಯ ಸ್ಪಬರತೆಯ ಬಗ್ಗೆ ಮಾತ್ರ ಇದ್ದುವು. ಈ ಬಗ್ಗೆ ಸುಭಾಸರು ತಮ್ಮ 'ಇಂಡಿಯನ್ ಸ್ಟ್ರಗಲ್' ಯೆಂಬ ಪುಸ್ತಕದಲ್ಲಿ ನಿರ್ದಾಕ್ಷಿಣ್ಯವಾಗಿ ಬರೆದುಬಿಟ್ಟಿದ್ದಾರೆ. ಅವರ ದಾರಿ ಸರಿಯೇ ಎನಿಸಲಿ ತಪ್ಪೇ ಎನಿಸಲಿ ಅವರು ತಮಗೆ ಅನಿಸಿದಂತೆ ಪ್ರಾಮಾಣಿಕ ರೀತಿಯಿಂದ ನಡೆದುಕೊಳ್ಳುತ್ತಿದ್ದರೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅವರ ಅಂತಃಕರಣದಲ್ಲಿ ಯಾವ ಭಾವನೆಗಳು, ಯಾವ ವಿಚಾರಗಳು ಕುದಿಯುತ್ತಿದ್ದ ವೆಂಬುದು, ಅವರು ೨೬ನೇ ನವೆಂಬರ್ ೧೯೪೦ರಲ್ಲಿ ಬಂಗಾಲ ಗವರ್ನರ ರಿಗೂ, ಬಂಗಾಲದ ಮಂತ್ರಿಗಳಿಗೂ ಬರೆದ ಪತ್ರದಿಂದ ನಿಚ್ಚಳವಾಗುತ್ತದೆ. ರಾಷ್ಟ್ರಕ್ಕೆ ಇದೇ ಅವರ ಸಂದೇಶವಾಗಿದೆ—

"ಈ ನಶ್ವರ ಜಗತ್ತಿನಲ್ಲಿ ಪ್ರತಿಯೊಂದು ಪದಾರ್ಥವೂ ನಷ್ಟವಾಗು ವಂಥದೇ ಆಗಿದೆ. ಆದರೆ ವಿಚಾರ ಮತ್ತು ಧ್ಯೇಯಗಳು ಮಾತ್ರ ನಷ್ಟವಾಗುವ ದಿಲ್ಲ. ಯಾವದೊಂದು ವಿಚಾರದ ಬೆನ್ನುಹತ್ತಿ ವ್ಯಕ್ತಿಯು ಮೃತನಾಗ ಬಹುದು. ಆದರೆ ಅವನ ಮರಣದ ನಂತರ ಅದೇ ವಿಚಾರವು ಸಾವಿರಾರು ಜನರಲ್ಲಿ ಬೇರೂರಬಹುದು. ಈ ಬಗೆಯಾಗಿದೆ ವಿಶ್ವದ ಚಕ್ರ. ಒಂದು

ಪೀಳಿಗೆಯ ವಿಚಾರವನ್ನು ಎರಡನೇ ಪೀಳಿಗೆಯು ಯಶಸ್ವಿಯನ್ನಾಗಿ ಮಾಡುವದು.

## ಗುಲಾಮಗಿರಿಯು ಶಾಪ !

" ಆದ್ದರಿಂದ ಯಾವದೊಂದು ತತ್ವದ ಬೆನ್ನು ಹತ್ತಿ ಅದರ ಯಶಸ್ವಿಗಾಗಿ ಆ ಜನ್ಮವೂ ಹೋರಾಟ ನಡೆಸಿ ಅದರಲ್ಲಿಯೇ ಮರಣ ಹೊಂದಿದರೆ ಎಷ್ಟೊಂದು ಸಮಾಧನವಾಗುವದು. ತಮ್ಮ ತತ್ವದ ಪುನರ್ಜನ್ಮವಾಗುವದೆಂಬುವದಕ್ಕಿಂತ ಹೆಚ್ಚಿನ ಸಮಾಧಾನ ಬೇರೊಂದಿದೆಯೇ? ತತ್ವಕ್ಕಾಗಿ ಆತ್ಮಾಹುತಿಯನ್ನು ಕೊಡುತ್ತಿರುವಾಗ ಇದಕ್ಕೂ ಹೆಚ್ಚಿನ ಸಮಾಧನ ಯಾವುದಿದೆ? ಆದ್ದರಿಂದ ತ್ಯಾಗ ಮಾಡುವದರಿಂದ ಯಾವ ಹಾನಿಯೂ ತಟ್ಟುವದಿಲ್ಲ. ಅದಕ್ಕೆ ಇಮ್ಮಡಿಯಾಗಿ ಫಲವು ದೊರೆಯುತ್ತದೆ. ವ್ಯಕ್ತಿಯು ಮೃತ್ಯುವನ್ನು ತಡೆ ಹಿಡಿಯುವದರಿಂದಲೇ ರಾಷ್ಟ್ರದ ರಕ್ಷಣೆಯಾಗುವದೆಂದಿದ್ದರೆ ಅವಶ್ಯವಾಗಿ ಹಾಗೆ ಮಾಡಬಹುದು. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ದೊರಕಬೇಕೆಂದು ನಾನಂತೂ ಇಂದು ಮೃತ್ಯುವಿನ ದವಡೆಯಲ್ಲಿ ಹಾರಿಕೊಳ್ಳುತ್ತೇನೆ.

" ನನ್ನ ದೇಶಬಾಂಧವರೆ, ಗುಲಾಮಗಿರಿಗಿಂತ ಹೆಚ್ಚಿನ ಶಾಪವು ಬೇರೊಂದಿಲ್ಲವೆಂಬುದನ್ನು ಮರೆಯಬೇಡಿರಿ. ಸ್ವಾತಂತ್ರ್ಯ ಸಂಪಾದನೆಗಾಗಿ ನಿಮ್ಮ ಸರಸ್ವವನ್ನೂ ಸೂರೆಗೊಳ್ಳಿರಿ. ಅನ್ಯಾಯದ ಪ್ರತೀಕಾರ ಮಾಡುವ ಕಾರ್ಯದಲ್ಲಿ ಪ್ರಾಣಾಹುತಿಯನ್ನು ಕೊಟ್ಟರೆ ಅದರಷ್ಟು ಪುಣ್ಯ ಬೇರೊಂದಿಲ್ಲ ! "

ಇಂಥ ವಿಚಾರ ಹಾಗು ಭಾವನೆಗಳಿಂದ ಪ್ರೇರಿತರಾಗಿ ಭಾರತಾಂಬೆಯ ಚರಣ ಕಮಲಗಳಲ್ಲಿ ತಮ್ಮ ಪ್ರಾಣ ಪುಷ್ಪವನ್ನರ್ಪಿಸಿದ ದೇಶಗೌರವ ಸುಭಾಸ ಬಾಬುಗಳು ಅಮರರೇ ಸರಿ !

---

# ಕ್ಯಾ. ಶಹಾ ನವಾಜ್

●

ಇವರ ಜನ್ಮ ಸ್ಥಳ ಪಂಜಾಬ ಪ್ರಾಂತದ ರಾವಳಪಿಂಡಿಯೆಂಬುದು. ೧೯೧೪ನೇ ಜನೇವರಿ ೨೪ ಇವರ ಜನ್ಮ ತಾರೀಖು. ಇವರ ಮನೆತನದ ಅರವತ್ತೆರಡು ಜನರು ಹಿಂದೀ ಸೇನೆಯಲ್ಲಿ ಸೇರಿದ್ದಾರೆ. ಇವರು ಡೆಹರಾಡೂನ ಮಿಲಿಟರಿ ಎಕೆಡೆಮಿಯಲ್ಲಿ ತರಬೇತಿ ಹೊಂದಿದರು. ೧೯೩೬ ರಲ್ಲಿ ಅವರಿಗೆ ಸೇನಾ ಕಮಿಶನ್ ದೊರೆಯಿತು. ೧೯೩೭ ರಲ್ಲಿ ಪಂಜಾಬದ ೧೪ನೇ ಸೇನೆಯಲ್ಲಿ ಉದ್ಯೋಗ ವಹಿಸಿದರು.

೧೯೪೨ ರಲ್ಲಿ ಹಿಂದೀ ರಾಷ್ಟ್ರೀಯ ಸೈನ್ಯದಲ್ಲಿ ಸೇರಿಕೊಂಡರು. ಈ ಆಝಾದ ಹಿಂದ ಸೇನೆಯ ಸಂಘಟನೆಗಾಗಿ ಸಹಾ ನವಾಜರು ತುಂಬ ಹೆಣಗಾಡಿದರು. ಈ ಸೇನೆಯ ಸಂಘಟನೆ ಸುಸಂಬದ್ಧವಾದದ್ದು ೧೯೪೨ನೇ ಜೂನ್‌ದಲ್ಲಿ ಬ್ಯಾಂಕಾಕ್‌ದಲ್ಲಿ ಸೇರಿದ ಹಿಂದೀ ಸಮ್ಮೇಳನದ ನಂತರ. ಅಗ್ರಗಣ್ಯ ಕ್ರಾಂತಿ ಪುರುಷರೂ, ಹಿಂದೀ ಸರಕಾರಕ್ಕೆ ತನ್ನ ಪ್ರಾಣದ ಬಾಯಾರಿಕೆಯನ್ನು ಹುಟ್ಟಿಸಿ ಎಷ್ಟೋ ವರುಷಗಳ ಮೊದಲೇ ಹಿಂದುಸ್ತಾನದಿಂದ ತಲೆ ತಪ್ಪಿಸಿಕೊಂಡು ಜಪಾನಿನಲ್ಲಿ ಹೋಗಿ ನಿಂತವರೂ ಆದ ರಾಸ್ ಬಿಹಾರೀ ಘೋಸರು ಆ ಸಮ್ಮೇಲನದ ಅಧ್ಯಕ್ಷತೆ ವಹಿಸಿದ್ದರು. ಅಲ್ಲಿ ಭಾರತ ರಾಷ್ಟ್ರೀಯ ಸೇನೆಯ ವ್ಯವಸ್ಥೆಯಾಗಿದ್ದಿತು. ಆ ಮೇಲೆ ಸುಭಾಸಚಂದ್ರರು ಅಂತರ್ಗಾಮಿಯಾಗಿ ಅದರಲ್ಲಿ ಸೇರಿಕೊಂಡು ಹಿಂದೀ ರಾಷ್ಟ್ರೀಯ ಸೇನೆಯ ನೇತಾಜಿ—ಸುಪ್ರಿಮ್ ಕಮಾಂಡರ್ ಆದುದು ೧೯೪೩ ಅಗಸ್ಟ ಕೊನೆಯಲ್ಲಿ. ಆದರೆ ಶಹಾ ನವಾಜರ ಕೈವಾಡ ಮಾತ್ರ ಆ ಸೇನೆಯ ಮೂಲ ರಚನೆಯಲ್ಲೇ ಇತ್ತು.

ಮಲಯ, ಬರ್ಮಾ, ಸಿಂಗಾಪುರ ಮೊದಲಾದ ಕಡೆಗೆ ಯುದ್ಧ ಕೈದಿಗಳಾಗಿ ದೊರೆತ ಹಿಂದೀ ಸೈನಿಕರನ್ನೂ ನಾಗರಿಕರನ್ನೂ ಹುರಿದುಂಬಿಸಿ ರಾಷ್ಟ್ರೀಯ ಸೇನೆಗೆ ಸೇರಿಸಿಕೊಳ್ಳುವ ಕಾರ್ಯದಲ್ಲಿ ಶಹಾ ನವಾಜರು

ಅವಿಶ್ರಾಂತವಾಗಿ ದುಡಿದರು. ಸುಭಾಸರು ಇವರಿಗೆ ಮಂತ್ರಿಪದವನ್ನು ಕೊಟ್ಟಿದ್ದರು. ಅಝಾದ ಹಿಂದ ಸೇನೆಯ ಒಂದು ಡಿವಿಜನ್ನಿನ ನಾಯಕ ಕ್ಯಾ. ಶಹಾ ನವಾಜರೇ. ಈ ಸೈನ್ಯವನ್ನು ಬರ್ಮಾದಿಂದ ಭಾರತದ ಗಡಿಯೊಳಗೆ ನುಗ್ಗಿಸಿ ಇಂಫಾಲಿನವರೆಗೂ ಮುಂದೊತ್ತಿ ಹೋಗುವಂತೆ ಮಾಡಿದ ಸಾಹಸದ ಶ್ರೇಯ ಇವರಿಗೇ ಸಲ್ಲುವದು. ಇಂಫಾಲ್ ಮೈದಾನದಲ್ಲಿ ತ್ರಿವರ್ಣ ಧ್ವಜವನ್ನು ಊರಿ ಕೀರ್ತಿ ಪಡೆದವರು ಶಹಾ ನವಾಜರೇ. ಇವರು ಯುದ್ಧದಲ್ಲಿ ತಮ್ಮ ಸಂಬಂಧಿಕರೊಡನೆ ಸಹ ಹೋರಾಡಬೇಕಾಗಿ ಬಂದಿತು. ಒಮ್ಮೆ ಅವರ ಅಣ್ಣನನ್ನೇ ಇದಿರಿಸಿದ್ದರು. ಮಣಿಪುರದಲ್ಲಿ ಬ್ರಿಟಿಷ್ ಮತ್ತು ಅವರ ಸಹಾಯಕ್ಕಿದ್ದ ಹಿಂದೀ ಸೈನ್ಯವನ್ನು ಹೊಡೆದಟ್ಟಿ ಹಿಂದೀ ರಾಷ್ಟ್ರಧ್ವಜವನ್ನು ಹಾರಾಡಿಸಿದವರೂ ಶಹಾ ನವಾಜರೇ.

ಅಝಾದ ಹಿಂದ ಸೈನಿಕರ ರಕ್ಷಣೆಯ ಕುರಿತಾಗಿ ಕೆಲವು ಜಾತೀಯತೆಯ ಮುಂದಾಳುಗಳು ಕ್ಯಾ. ಶಹಾ ನವಾಜರ ಸಂದರ್ಶನವನ್ನು ತೆಗೆದುಕೊಂಡರು. ಶಹಾ ನವಾಜರು ದೇಶಪ್ರೇಮಿಗಳು. ಅವರು ಸ್ಪಷ್ಟವಾಗಿ ಹೇಳಿದರು, "ನಾವು ಕಾರ್ಯ ಮಾಡಿದ್ದು ಯಾವದೇ ಜಾತಿಗಾಗಿ ಅಥವಾ ಧರ್ಮಕ್ಕಾಗಿ ಅಲ್ಲ. ನಾವು ದೇಶಸೇವೆ ಮಾಡಿದ್ದೇವೆ. ನಮ್ಮ ರಕ್ಷಣೆಯನ್ನು ಕಾಂಗ್ರೆಸ್ಸೇ ಮಾಡಬಲ್ಲದು." ಶಹಾ ನವಾಜರ ಹಸ್ತಾಕ್ಷರದ ಡೈರಿ ಸರಕಾರಕ್ಕೆ ದೊರೆತಿದೆ.

## ಡೈರಿಯ ಕೆಲವಂಶ

'ತಾ. ೩೦—೩—೧೯೪೫ರ ಬೂಬಿಯು ಕೆನ್ನೆಡಿ ಶಿಖರದಿಂದ ಬಂದ. ಅವನ ವರದಿ ನೋಡಿ ತಳಮಳವಾಗುತ್ತದೆ. ಜಪಾನರು ಹಿಂದೀ ರಾಷ್ಟ್ರೀಯ ಸೇನೆಯ ವಿಧ್ವಂಸಕ ದಳವನ್ನು ತಮ್ಮ ಕೂಲಿಕಾರರೆಂಬಂತೆ ನೋಡುತ್ತಿದ್ದಾರೆ. ಈ ಸಂಬಂಧವಾಗಿ ಕಿಮೆುವಾರಿಯನ್ನು ಕಾಣುವದಕ್ಕಾಗಿ ನಾನೀ ದಿನ ಹಾಕಿಗೆ ಹೋಗುತ್ತೇನೆ. ಈ ಪಕ್ಷಪಾತಮಯ 'ಸಹಾಭಿವೃದ್ಧಿ'ಯ ಪರಿಣಾಮವೇನಾಗುವದೋ ಎಂದು ನನಗೆ ದಿಗಿಲಾಗುತ್ತಿದೆ.'

'೭—೭—೧೯೪೫ರ. ನಮ್ಮ ಜನರಿಗೆ ಯಾವ ರೇಶನೂ ದೊರೆಯಲಿಲ್ಲ; ಹಸಿವೆಯಿಂದ ನಾಲ್ವರು ಗಾರ್ವಾಲಿಗಳು ಮಡಿದರು. ಇದಕ್ಕೇನಾದರೂ

ಮಾಡುವಂತೆ ಕೇಳಿಕೊಳ್ಳಲು ನಾನೂ ರಾಮ್‌ಸರೂಪರೂ ಹಿಕಾರಿಕಿಕಾನನನ್ನು ಕಂಡೆವು. ಅವರು ಇದನ್ನು ಎಳ್ಳಷ್ಟೂ ಗಣಿಸುವಂತೆ ತೋರುವದಿಲ್ಲ. ನನ್ನ ಜನರನ್ನೀರೀತಿ ಉದ್ದೇಶಪೂರ್ವಕ ಉಪವಾಸ ಕೆಡಹುವ ಕಾರಣವೇನೂ ನನಗರಿಯದು.'

'೧೫—೭—೧೯೪೪. ನನ್ನ ಜನರು ಹಸಿವೆಯಿಂದ ನೊಣಗಳಂತೆ ಸಾಯುತ್ತಿದ್ದಾರೆ. ಕೆಲವರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಜಪಾನರು ನಮಗಾವ ಸಹಾಯವನ್ನೂ ಕೊಡುವದಿಲ್ಲ.'

'೮—೮—೪೪. ಕಿಮೆವಾರಿಯ ಉತ್ತರದೊಡನೆ ಪಾರಾ ಮರಳಿ ಬಂದಿದ್ದಾನೆ. ಹಣ ಅಥವಾ ಇತರ ಸಹಾಯದ ವ್ಯವಸ್ಥೆಯೇ ಇಲ್ಲ. ಟಿರಾವ್ರಿನಲ್ಲಿರುವ ನಮ್ಮ ರೋಗಿಗಳು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಅವನ ಸೂಚನೆ ಬಂದಿದೆ.'

'೨೧—೨—೧೯೪೫. ಈ ರಾತ್ರಿ ನಾನು ಯುದ್ಧರಂಗಕ್ಕೆ ಹೋಗುತ್ತೇನೆ. ಮಧ್ಯರಾತ್ರಿಗೆ ಹೊರಡುತ್ತೇನೆ. ನೇತಾಜಿ ನನ್ನನ್ನು ಬೀಳ್ಕೊಡಲು ಬಂದಿದ್ದರು. ಮತ್ತು ನನಗೆಲ್ಲಾ ಸೂಚನೆಗಳನ್ನೂ ಕೊಟ್ಟಿದ್ದಾರೆ.'

'೨೨—೨—೪೫. ಕುವಾಂಗ್ ವಾದಾಂಗನ್ನು ಸೇರಿದೆ. ಒಂದು ವಳಶಸ್ತ್ರ ಕೆಳಗಿಟ್ಟಿತು ಮಿಕ್ಕವು ಸಿಕ್ಕಿ ಬಿದ್ದಂತಾಗಿವೆ.'

'೨೩—೨—೪೫. ವೈರಿಯನ್ನು ಇರ್ರವಾಡಿ ಹೊಳೆಯ ಆಚೆಗೋಡಿಸಬೇಕೆಂದು ಆಜ್ಞೆ ಬಂದಿದೆ. ನಾನು ರಕ್ಷಣಾ ಲೈನಿಗೆ ಹೋಗಿ ಭಾಷಣ ಕೊಟ್ಟು ಸೈಗಲ್ ಮತ್ತು ಧಿಲನರಿಗೆ ದಾಳಿಯಾಜ್ಞೆ ಕೊಟ್ಟೆ.'

'೨೫—೨—೧೯೪೫. ನೇತಾಜೀ ಅತಿ ಮುಂಜಾನೆಯಲ್ಲೇ ಬಂದಿದ್ದಾರೆ. ಅವರ ಭೇಟಿ ಮಾಡಿ ಪೋಪಾದ ಪರಿಸ್ಥಿತಿಯನ್ನೆಲ್ಲಾ ಹೇಳಿದೆ. ಪೋಪಾ ಮತ್ತು ಕ್ಯಾಕ್ ಪೆಡಾಂಗಿಗೆ ಹೋಗಬೇಕೆಂದು ಅವರ ಪೃಥ ನಿರ್ಧಾರವಾಗಿತ್ತು. ಅದು ತೀರಾ ಅಪಾಯಕರವಾದ್ದರಿಂದ ನಾನದನ್ನು ಬಲವಾಗಿ ವಿರೋಧಿಸಿದೆ. ಕೆಡವು ಘಂಟೆಗಳ ಬಳಿಕ ಬ್ರಿಟಿಷರು ಪಿಜಿನ್‌ಟಿನ್ ವಶಪಡಿಸಿಕೊಂಡು ಟುವಾಂಗ್‌ಥಾದ ಕಡೆಗೆ ಬರುತ್ತಿದ್ದಾರೆಂದು ಮೇಜರ್ ಟಕೇಶಿ ಸುದ್ದಿ ತಂದ.'

'೧೮—೪—೪೫. ರಾಝ್, ಮದನ್, ಸರ್ವಾರ್, ಡೇ ಮೊದಲಾದವರು ಫರಾರಿ. ಇದು ಅತ್ಯಂತ ಶೋಚನೀಯ. ಬ್ರಿಟಿಷ್‌ರು ಟುವಾಂಗ್ವಿಂಗ್ಲಿ ಆಕ್ರಮಿಸಿಕೊಂಡಿದ್ದಾರೆ. ಜಪಾನರೂ ಅಜಾದ್ ಹಿಂದೀ ಫೌಜೂ ಪ್ರತಿದಾಳಿ ನಡೆಸುತ್ತಿದೆ.'

'೧೯—೪—೪೫. ಬ್ರಿಟಿಷ್ ಟೇಂಕುಗಳೂ ಸೇನಾ ವಾಹನಗಳೂ ಮಾಂಗ್ವೆಯೊಳಗೆ ನುಗ್ಗಿ ಬಂದಿವೆ. ಸಂಘಟಿತ ಪ್ರತಿಭಟನೆ ಕೊಡುವದು ಅಸಾಧ್ಯವಾಗಿದೆ.'

'೪—೫—೪೫. ಒಂದು ಮುರುಕು ಗುಡಿಸಲಿನಲ್ಲಿ ದಿನ ದೂಡುತ್ತಿದ್ದೇನೆ. ಇಡೀ ದಿನ ಮಳೆ ಬರುತ್ತಿದೆ. ನಮ್ಮನ್ನಿಲ್ಲಿ ಹೀಗೆಯೇ ಬಿಟ್ಟು ಜಪಾನರೋಡುತ್ತಿದ್ದಾರೆ. ನಮ್ಮ ಗೊಡವೆಯಲ್ಲಿಯೇ ಅವರಿಲ್ಲ.'

'೫—೫—೪೫. ಇನ್ನು ಹಿಂ. ರಾ. ಸೇನೆಯಿಂದ ಜಪಾನರಿಗೇನೂ ಪ್ರಯೋಜನ ಕಾಣುವದಿಲ್ಲ. ನಮ್ಮ ಎಲ್ಲಾ ಸಹಾಯಾಧಿಕಾರಿಗಳನ್ನೂ ಹಿಂದೆಗೆದುಕೊಂಡಿದ್ದಾರೆ. ಸೈನಿಕರ ಶಿಸ್ತು ಮತ್ತು ಧೈರ್ಯ ಶಿಥಿಲವಾಗಹತ್ತಿದೆ.'

'೧೩—೫—೪೫. ಬ್ರಿಟಿಷ್ ಮರು ಸೇನೆಗಳ ಪೂರ್ಣ ಫಾರ್ತೆ ದೊರೆಯಿತು. ನಾವು ಪಿಂಗಡಿಸಲ್ಪಟ್ಟು ಪೂರ್ಣ ಸಿಕ್ಕಿ ಬಿದ್ದಿದ್ದೇವೆಂದು ಕಾಣುತ್ತದೆ. ತಪ್ಪಿಸಿಕೊಳ್ಳುವ ಹಾದಿಯಿಲ್ಲ. ೧೯ ಘಂಟೆಯೊಳಗೆ ನಾವು ಹಳ್ಳಿ ಬಿಟ್ಟು ಕಾಡಿನೊಳಗೆ ಸೇರಿಕೊಂಡೆವು. ನನ್ನ ಜನರಿಗೆ ಎಲ್ಲಾ ಸಂಗತಿಯನ್ನೂ ವಿವರಿಸಿ ಹೇಳಿದೆ. ಬಹು ಸಂಖ್ಯಾಕರು ಯುದ್ಧ ಕೈದಿಗಳಾಗೋಣವೆಂದು ಅಭಿಪ್ರಾಯಪಟ್ಟರು.'

'೧೭—೫—೪೫. ಸಿಟಾಪಿನ್ಸ್ವೀಕ್ಸ್ ಹಳ್ಳಿಯನ್ನು ಮಧ್ಯ ರಾತ್ರಿ ಹೊತ್ತಿಗೆ ಪ್ರವೇಸುತ್ತಿದ್ದೆವು. ೨–೧ನೇ ಪಂಜಾಬು ದಳವು ಕೇವಲ ೧೫ ಗಜ ದೂರದಿಂದ ನಮ್ಮ ಮೇಲೆ ಭೀಕರ ಗುಂಡಿನ ಮಳೆಗರೆಯಿತು. ನಮ್ಮ ಮಾರ್ಗದರ್ಶಕ ಕೊಲ್ಲಲ್ಪಟ್ಟ. ನನ್ನ ಬೇಗು ಕಳೆದುಹೋಯಿತು. ಒಂದು ಕಾಡಿನಲ್ಲಿ ೮ ಘಂಟೆಗಳನ್ನು ಕಳೆದೆ. ಹೊರಟೆ, ಆದರೆ ಎಲ್ಲಾ ಹಾದಿಗಳೂ ಬಂದಾಗಿದ್ದುವು. ೨–೧ ದಳದವರು ಸೆರೆ ಹಿಡಿದರು. ಪೆಗು ಡಿವಿಜನಲ್ ಕಾರ್ಯಾಲಯಕ್ಕೊಯ್ದರು. ಅಲ್ಲಿ ಜೈಲಿಗೆ ಹಾಕಿದರು.'

# ಕ್ಯಾ. ಸೈಗಲ್

●

ಲಾಹೋರ್ ಹೈಕೋರ್ಟಿನ ನ್ಯಾಯಾಧೀಶರಾದ ಸರ್ ಅಚ್ಛೂರಾಮರ ಮಗನೇ ಕ್ಯಾ. ಸೈಗಲ್. ೧೯೧೭ನೇ ಜನೆವರಿಯಲ್ಲಿ ಹೋಷಿಯಾರ್‌ಪುರದಲ್ಲಿ ಇವರ ಜನನವಾಯಿತು. ಹಿಂದೀ ಸರಕಾರದ ಮಿಲಿಟರಿ ಎಕೆಡೆಮಿಯಲ್ಲಿ ಇವರು ಶಿಕ್ಷಣ ಪಡೆದಿದ್ದರು. ೧೯೪೦ ರಲ್ಲಿ ಬಲೂಚಿಯ ೧೦ನೇ ದಳದಲ್ಲಿ ಇವರಿಗೆ ಕೆಲಸ ದೊರೆಯಿತು. ಸಿಂಗಾಪುರದಲ್ಲಿ ಬ್ರಿಟಿಷರ ಸೋಲಾದ ಬಳಿಕ ಅಜಾದ್ ಹಿಂದ್ ಫೌಜಿಗೆ ಇವರು ಸೇರಿದರು. ಅಲ್ಲಿ ಇನ್ನೂ ಪರಾಕ್ರಮದ ಕೆಲಸ ಮಾಡಿದರು. ಆ ಫೌಜಿನ ಮೂಲಸ್ತಂಭಗಳಲ್ಲೊಬ್ಬರಿವರೆಂದರೂ ಸಲ್ಲುವದು. ಅದರ ಮಿಲಿಟರಿ ಕಾರ್ಯದರ್ಶಿಗಳಾಗಿ ಹೊಣೆಗಾರಿಕೆಯ ಕೆಲಸಗಳನ್ನು ವಹಿಸಿದ್ದರು.

ಕ್ಯಾ. ಸೈಗಲ್‌ನನ್ನು ಕಂಡರೆ ತಂದೆಗೆ ತುಂಬಾ ಪ್ರೀತಿ. ಕೆಂಪು ಕೋಟೆಯಲ್ಲಿ ವಿಚಾರಣೆಯ ದಿನ ಆತನೂ ಕೋರ್ಟಿನಲ್ಲಿದ್ದ. ಕೋರ್ಟು ವಿರಾಮಕ್ಕೆದ್ದಾಗ ಮಗನಿದ್ದಲ್ಲಿಗೆ ಹೋಗಿ ಕೃತಾರ್ಥ ಜೀವಿಯಂತೆ ಹಿಗ್ಗಳಿಕೆಯಿಂದ ಸೈಗಲ್‌ನ ಕೈ ಕುಲುಕಿದ. ಅಂದು ಭಾವ ಬಿದಿಗೆ. ಸಹೋದರಿಯರು ಆರತಿಯನ್ನೆತ್ತಿದರು. ಹಣೆಗೆ ಕುಂಕುಮ ತಿಲಕವನ್ನಿಟ್ಟರು. ದೀರ್ಘಾಯುರಾರೋಗ್ಯವನ್ನು ಕೋರಿದರು. ಕ್ಯಾ. ಸೈಗಲ್‌ರ ಹಸ್ತಲಿಖಿತ ದಿನಚರಿ ಕೂಡ ಸರಕಾರಕ್ಕೆ ಸಿಕ್ಕಿದೆ.

## ಸೈಗಲ್‌ನ ಡೈರಿಯ ಕೆಲವಂಶ

'ಫೆಬ್ರುವರಿ ೧೯೪೪. ಎಲ್ಲಾ ದಳ ನಾಯಕರೂ ಮಿಲಿಟರಿ ಪರೇಡನ್ನು ನಡೆಯಿಸಿ, ಅರಾಕಾನ್ ರಣರಂಗದ ಪರಿಚಯವನ್ನು ತಿಳಿಸಬೇಕೆಂದು ನೇತಾಜಿಯ ಆಜ್ಞೆ ಬಂದಿದೆ. ನಾವು ದೀರ್ಘ ನಿರೀಕ್ಷೆಯಲ್ಲಿದ್ದ ದಿಲ್ಲಿಯ ಮೇಲಿನ ದಾಳಿ ಈಗ ತಾನೆ ಆರಂಭವಾಗಿದೆ ಎಂದು ಈ ವಿಶೇಷಾಜ್ಞೆಯಲ್ಲಿದೆ. ದೃಢ ನಿರ್ಧಾರದಿಂದ ಮುಂದೊತ್ತಬೇಕು. ಈಗ ಅರಾಕಾನ್ ಗುಡ್ಡದಲ್ಲಿ ಹಾರಾಡು

## ಬಂಧಮುಕ್ತರಾದ ಸೇನಾಪತಿ ತ್ರಯರು



ಕ್ಯಾ. ಶಹಾನವಾಜ



ಕ್ಯಾ. ಸೈಗಲ



ಲೆ. ಧಿಲನ

ತ್ತಿರುವ ರಾಷ್ಟ್ರೀಯ ತ್ರಿವರ್ಣ ಧ್ವಜವನ್ನು ದಿಲ್ಲಿಯ ವೈಸರಾಯೀ ಭವನದ ಮೇಲೇರಿಸುವ ವರೆಗೆ ಮತ್ತು ದಿಲ್ಲಿಯ ಪ್ರಸಿದ್ಧ ಕೆಂಪು ಕೋಟೆಯಲ್ಲಿ ವಿಜಯ ಮೆರವಣಿಗೆ ನಡೆಸುವ ವರೆಗೆ ಆ ದೌಡನ್ನು ನಿಲ್ಲಿಸಬಾರದು ಎಂದು ನೇತಾಜೀ ಆಜ್ಞೆಯಲ್ಲಿದೆ. 'ದಿಲ್ಲಿಯ ಮೇಲೆ ದೌಡು' ಎಂಬುದೇ ಮುಂದಿನ ರಣರಂಗವಾಗಬೇಕೆಂದೂ ಈ ಆಜ್ಞೆಯಲ್ಲಿ ಸೂಚಿಸಲಾಗಿದೆ '

' ತಾ. ೧೭—೨—೪೫. ವೈರಿಯು ಇರ್‍ರವಾಡಿ ಹೊಳೆ ದಾಟಿ ಧಿಲ ಸನ ಭಾಗಗಕ್ಕೆ ನುಗ್ಗಿ ಬಂದಿದ್ದಾನೆ. ಅವನ ಸೇನೆ ಬಹುತೇಕವಾಗಿ ನಾಶ ವಾದಂತೆಯೇ. ಸೈನಿಕರ ಶಿಸ್ತು ಮತ್ತು ಧೈರ್ಯ ಕಳೆದುಹೋಗಿವೆ. '

'೨೨—೨—೧೯೪೫. ಕರ್ನಲ್ ಲಿಝುಝು ಗುಣ ಹೊಂದುವ ವರೆಗೆ ಆ ದಳದ ನಾಯಕತ್ವವು ಕ್ಯಾಪ್ಟನ್ ಶಾನವಾಜರ ಕೈಗೆ ಬಂದಿದೆ.'

'೧—೩—೧೯೪೫. ರಣರಂಗಕ್ಕೆ ಹೋಗಲೊಪ್ಪದ ಒಬ್ಬ ಅಧಿಕಾರಿಗೆ ನಾನು ಮರಣ ದಂಡನೆ ವಿಧಿಸಬೇಕಾಯಿತು. ಎಷ್ಟೊಂದು ಮರುಕದಾಯಕ! ಇದೀಗ ಮಾನವ ಪ್ರಾಣಗಳ ಅನಾಸ್ಥೆ.'

'೨—೩—೧೯೪೫. ಈ ಅಧಿಕಾರಿಗಳು ಇದುವರೆಗೆ ಮರಳಿ ಬಂದಿಲ್ಲ. ಅವರು ವೈರಿಗಳನ್ನು ಸೇರಿಕೊಂಡರೆಂಬುದು ಖಾಡಿತ. ದಗಾಖೋರ ಘಟಿಂಗರು! ಇಂದಿನಿಂದ ನಾನು ಅತ್ಯಂತ ಕಠೋರವಾಗಿ ವರ್ತಿಸುವದೇ ಸರಿ. ಯಾರ ಮೇಲಾದರೂ ಸಂದೇಹ ತೋರಿದರೆ ಕೂಡಲೇ ಗುಂಡಿಟ್ಟು-ಕೊಲ್ಲಬೇಕೆಂದು ನಾನೊಂದು ಆಜ್ಞೆ ಹೊರಡಿಸುತ್ತೇನೆ.'

# ಗುರುಬಕ್ಷಸಿಂಗ ಧಿಲನ

●

೧೯೧೫ನೇ ಎಪ್ರಿಲ್ ನಾಲ್ಕನೇ ತಾರೀಖಿನ ದಿವಸ ಲಾಹೋರ
ಜಿಲ್ಹೆಯ ಅಲ್ಗೋನಿಯಲ್ಲಿ ಈ ವೀರನ ಜನನವಾಯಿತು. ಜಾತಿಯಿಂ
ಇವರು ಶೀಖರು. ಒಳ್ಳೆ ಮನೆತನಸ್ಥರು. ಮೆಟ್ರಿಕ್ಯು ಪಾಸಾದನಂತ
ಇವರು ಸೈನ್ಯದಲ್ಲಿ ಸಿಪಾಯಿಯಾಗಿ ಸೇರಿಕೊಂಡರು. ೧೯೩೭ ರಲ್ಲಿ ಇವರಿ
ಸೇನಾ ಕಮಿಶನ್ ದೊರೆಯಿತು. ಡೆಹರಾಡೂನ ಲಷ್ಕರೀ ಶಿಕ್ಷಣ ಸಂಸ್
ಯಲ್ಲಿ ಉಚ್ಚ ಪದವಿ ದೊರೆತ ಬಳಿಕ ಇವರನ್ನು ಪಂಜಾಬ ರೆಜಿಮೆಂಟಿ
ಕಳಿಸಲಾಯಿತು. ಅಲ್ಲಿ ಕೆಲವು ದಿವಸ ಕಳೆದ ಬಳಿಕ ಮುಂದಿನ ಶಿಕ್ಷ
ಕ್ಕಾಗಿ ಪುಣೆಗೆ ಕಳುಹಿಸಲ್ಪಟ್ಟರು. ಅಲ್ಲಿಯೂ ಯಶಸ್ಸು ಸಂಪಾದಿಸಿದರು
ಆ ನಂತರ ಇವರು ಮಲಯಾ ಅರಣ್ಯದಲ್ಲಿರುವ ತಮ್ಮ ಸೈನ್ಯಕ್ಕೆ ಹೋ
ಸೇರಿಕೊಂಡರು. ಜಪಾನರು ಭೂಮ್ಯಾಕಾಶಗಳಿಂದ ಬ್ರಿಟಿಷ್ ಮತ್ತ
ಹಿಂದೀ ಸೈನ್ಯದ ಮೇಲೆ ದಾಳಿ ನಡೆಸಿ ಪ್ರಾಣಹಿಂಸೆ ನಡೆಸಿದಾಗ ಕ್ಯಾ
ಧಿಲನರು ಅನೇಕರ ಪ್ರಾಣರಕ್ಷಣೆ ಮಾಡಿದರು. ಆದರೆ ಜಪಾನರು ಎ
ಮಾರ್ಗಗಳಲ್ಲಿಯೂ ಸರ್ಪ ಕಾವಲನ್ನಿಟ್ಟುದರಿಂದ ಜಾರಿಕೊಂಡು ಹೋಗ
ವದು ಸಾಧ್ಯವಾಗದೆ ಧಿಲನರು ಯುದ್ಧ ಕೈದಿಯಾಗಬೇಕಾಯಿತು
ಬ್ಯಾಂಕಾಕದಲ್ಲಿ ಹಿಂದೀ ಮುಖಂಡರ ಪರಿಷತ್ತಿಗೆ ಬರಬೇಕೆಂದು ಆಮಂತ್ರ
ಇವರಿಗೂ ಬಂದಿತು. ಅಲ್ಲಿ ಹೋದಬಳಿಕ ಆಝಾದ ಹಿಂದ ಸೈನ್ಯಕ
ಇವರೂ ಸೇರಿಕೊಂಡರು. ೧೯೪೨ರಲ್ಲಿ ಸಿಂಗಾಪುರದ ಪತನವಾದ ಮೇ
ಕಳೆದ ಮೇ ತಿಂಗಳಲ್ಲಿ ಅವರ ಕೈಸೆರೆಯಾಗುವತನಕ ಅವರು ಮಾಡಿ
ಕಾರಾಗಿರಿಯ ಬಗ್ಗೆ ವಿಶ್ವಸನೀಯವಾದ ವಾರ್ತೆಗಳು ಇನ್ನೂ ತಿಳಿಯಲ
ಸಾಧ್ಯವಾಗಲಿಲ್ಲ.

ಕ್ಯಾ. ಧಿಲನರ ಹೆಂಡತಿಯೂ ತಕ್ಕಮಟ್ಟಿಗೆ ಓದಿಕೊಂಡವಳು
ಇಂಗ್ಲೀಷು ಓದು-ಬರಹವನ್ನೂ ಬಲ್ಲಳು. ಅವರಿಗೆ ಸಂತಾನವೇನೂ ಇಲ್ಲ

ಕ್ಯಾ. ಧಿಲನರ ತಂದೆ ಸೈನ್ಯದಲ್ಲಿ ೨೨ ವರ್ಷ ಕೆಲಸ ಮಾಡಿದ್ದಾರೆ. ಅವರ ಇಬ್ಬರು ಸಹೋದರರೂ ಸೈನ್ಯದಲ್ಲಿದ್ದಾರೆ. ಒಬ್ಬನು ಡೈಪ್ಯುಟಿ ಫಾರೆಸ್ಟ ರೇಂಜ ಅಧಿಕಾರಿಯಾಗಿದ್ದಾನೆ.

ಕ್ಯಾ. ಧಿಲಸರು ನೇತಾಜಿ ಸುಭಾಸ ಬೋಸರಿಗೆ ತಾ. ೨೦–೩–೧೯೪೫ಕ್ಕೆ ಈ ಕೆಳಗಿನಂತೆ ಒಂದು ಪತ್ರವನ್ನು ಬರೆದಿದ್ದರೆಂದು ಹೇಳುತ್ತಾರೆ.

“ ಶಬ್ದಕ್ಕಿಂತ ಅಶ್ರುಗಳಿಂದಲೇ ನಾನು ನನ್ನ ಭಾವನೆಗಳನ್ನು ವ್ಯಕ್ತ ಮಾಡಬಲ್ಲೆ. ನಾನು ನಿಮಗೆ ಕೊಟ್ಟ ವಚನವನ್ನು ಪಾಲಿಸುವದರಲ್ಲಿ ನನಗೆ ಅಪಯಶಸ್ಸು ಬಂದಿತು. ಇಷ್ಟೇ ಅಲ್ಲ ನಿಮಗೂ ನಿಮ್ಮ ಆಜಾದ ಸೈನ್ಯಕ್ಕೂ ಕಲಂಕ ತರಲು ನಾನೊಬ್ಬನೇ ಕಾರಣನಾದೆನು. ಮತ್ತೆ ವಚನ ಕೊಡಲು ನನಗೆ ಮೋರೆಯಿಲ್ಲ. ನಾನು ನನ್ನ ಕೈದೆಯಿಂದಲೇ ಅದನ್ನು ಸಿದ್ಧಮಾಡಿ ತೋರಿಸುವೆನು. ”

---

## ಆಜಾದ್ ಹಿಂದ್ ಸೈನ್ಯದ ಸಮರ ಗೀತೆ

ಕದಂ ಕದಂ ಬಢಾಯೇ ಜಾ
ಖುಷೀಕೆ ಗೀತ್ ಗಾಯೆ ಜಾ
ಯಹ ಜಿಂದಗಿ ಹೈ ಕೌಮ್ ಕಿ
(ತೋ) ಕೌಮ್ ಪೆ ಲುಟಾಯೆ ಜಾ!
ತು ಷೇರ್-ಎ-ಹಿಂದ್ ಆಗೇ ಬಢೊ
ಮರ್‌ನೇಸೆ ಫಿರ್ ಭೀ ತೂ ನ ಡರ್
ಆಸ್ಮಾನ್ ತಕ್ ಉಠಾಕೆ ಸರ್
ಜೋಷ್-ಎ-ವತನ್ ಬಢಾಯೆ ಜಾ!

ತೇರೀ ಹಿಮ್ಮತ್ ಬಢತೇ ರಹೇ
ಖುದಾ ತೇರೀ ಸುನ್‌ತಾ ರಹೇ
ಜೋ ಸಾಮ್‌ನೆ ತೇರೀ ಚಢೇ
ತೋ ಖಾಕ್ ಮೇಂ ಮಿಲಾಯೆ ಜಾ!
ಚಲೋ ದಿಲ್ಲೀ ಪುಕಾರಕೆ
ಕೌಮೀ ನಿಶಾನ್ ಸಂಭಾಲಕೆ
ಲಾಲ್ ಕಿಲ್ಲಾ ಗಾಢ್‌ಕೆ
ಲಹರಾಯೆ ಜಾ, ಲಹರಾಯೆ ಜಾ!

# ರಾಸಬಿಹಾರಿ ಘೋಷ

ಟೋಕಿಯೋದಲ್ಲಿ ರಾಸಬಿಹಾರಿ ಘೋಷರು ದಿವಂಗತರಾದರೆಂಬ ದುಃಖಮಯ ವಾರ್ತೆಯು ಹಿಂದುಸ್ತಾನದಲ್ಲೆಲ್ಲ ಕೆಲವು ದಿವಸಗಳ ಹಿಂದೆ ತಿಳಿದು ಬಂದಾಗ ಎಲ್ಲರ ಹೃದಯಗಳೂ ತಳಮಳಗೊಂಡವು. ಭಾರತೀಯ ಕ್ರಾಂತಿಕಾರರ ಜೀವಂತ ಇತಿಹಾಸವಾಗಿದ್ದಂಥ ಒಂದು ವ್ಯಕ್ತಿಯು ಇಹ-ಲೋಕದಲ್ಲಿಲ್ಲದಂತಾಯ್ತು. ಬ್ರಿಟಿಷ್ ಪತ್ರಿಕಾಕರ್ತರು ಕೆಲವು ಸಲ ತಪ್ಪಿನಿಂದ "ಬೋಸ" ಎಂದು ಇವರಿಗೆ ಸಂಬೋಧಿಸಿದ್ದುಂಟು. ರಾಸಬಿಹಾರೀ ಘೋಷರು ೧೯೦೮ರಲ್ಲಿ ಹಿಂದುಸ್ತಾನದಲ್ಲೆಲ್ಲ ಕ್ರಾಂತಿಯ ಗಾಳಿ ಬೀಸಿದಾಗ ಉಪಯುಕ್ತ ಬಂದವರಲ್ಲೊಬ್ಬರು. ಕಳೆದ ಮೂವತ್ತು ವರ್ಷಗಳಿಂದ ಅಂತರಾಷ್ಟ್ರೀಯ ಖ್ಯಾತಿಯನ್ನು ಹೊಂದಿದ ದೇಶಭಕ್ತರಲ್ಲಿ ಇವರು ಅಗ್ರಗಣ್ಯರಾಗಿದ್ದರು.

ಸಾಧಾರಣವಾಗಿ ಬಡ ಕುಟುಂಬದಲ್ಲಿಯೇ ರಾಸಬಿಹಾರೀ ಘೋಷರು ಜನ್ಮ ತಾಳಿದ್ದರೆನ್ನಬಹುದು. ಚಿಕ್ಕ ವಯಸ್ಸಿನಲ್ಲಿಯೇ ಇವರು ಡೆಹರಾಡೂನಿನಲ್ಲಿ 'ಅರಣ್ಯ ಸಂಶೋಧನ ಸಂಸ್ಥೆ' (ಫಾರೆಸ್ಟ ರಿಸರ್ಚ್ ಇನ್ಸ್ಟಿಟ್ಯೂಟ್) ಯಲ್ಲಿ ಕಾರಕೂನಿಕೆಯನ್ನು ಮಾಡುತ್ತಿದ್ದರು. ಕ್ರಾಂತಿಕಾರರ ಕೇಂದ್ರವಾದ ಕಲಕತ್ತೆ ಮತ್ತು ಚಂದ್ರನಗರದಿಂದ ದೂರ ಇರಬೇಕಾಗಿತ್ತು, ಹೊಟ್ಟೆಯ ಪಾಡಿಗಾಗಿ. ಅಲ್ಲದೆ ಇವರು ಯಾವಾಗಲೂ ಸರಕಾರೀ ನೌಕರರೊಡನೆಯೇ ಇರುವ ಪ್ರಸಂಗವಿತ್ತು. ಆದರೂ ಮೂಲತಃ ಕ್ರಾಂತಿಕಾರ ಪ್ರವೃತ್ತಿಯವರಾದ್ದರಿಂದ ಅವರು ಸುಮ್ಮಗುಳಿಯಲಿಲ್ಲ. ಸರಕಾರೀ ನೌಕರಿಯಲ್ಲಿದ್ದಾಗಲೂ ಎಷ್ಟೋ ಸಲ ರಜೆ ಪಡೆದು ಅವರು ಪಂಜಾಬ ಮತ್ತು ಸಂಯುಕ್ತ ಪ್ರಾಂತಗಳಲ್ಲಿ ಬಲವುಳ್ಳ ಕ್ರಾಂತಿಕಾರಕ ಸಂಘಟನೆಯನ್ನು ಮಾಡಿದ್ದುಂಟು.

ರಾಜದ್ರೋಹೀ ಸಮಿತಿಯ ವರದಿಯಂತೆ "ರಾಸಬಿಹಾರಿಯವರು ದಿಲ್ಲೀ ಒಳಸಂಚಿನ ಆರೋಪಿಗಳಾದ ದೀನಾನಾಥ, ಅವಧಬಿಹಾರಿ, ಅಮೀರ

ಚಂದ, ಬಾಲಿ ಮುಕುಂದ ಮೊದಲಾದ ಕ್ರಾಂತಿಕಾರರಿಗೆಲ್ಲ ಬಾಂಬು ಒಗೆಯುವದನ್ನೂ, ರಾಜದ್ರೋಹಾತ್ಮಕ ಸಾಹಿತ್ಯವನ್ನು ಪ್ರಸಾರ ಮಾಡು ವದನ್ನೂ ಚೆನ್ನಾಗಿ ಕಲಿಸಿಕೊಟ್ಟಿದ್ದರು." ಈ ಆರೋಪಿಗಳಲ್ಲಿಯ ಅಮೀರ ಚಂದರೆಂಬನರು ಸ್ವಾಮೀರಾಮತೀರ್ಥರ ಪಕ್ಕಾ ಅನುಯಾಯಿಗಳಿದ್ದರು. ಮೇಲ್ಕಾಣಿಸಿದವರಲ್ಲಿ ಕ್ಷಮೆಯ ಸಾಕ್ಷಿದಾರರಾದ ದೀನಾನಾಥರ ಹೊರತು ಮಿಕ್ಕವರಿಗೆಲ್ಲ ಗಲ್ಲಿನ ಶಿಕ್ಷೆ ಕೊಡಲಾಯಿತು. ಗಲ್ಲಿನ ಶಿಕ್ಷೆಗೆ ಗುರಿಯಾದ ಅಮಿರಚಂದರನ್ನು ಕಾಣುವ ಆವಶ್ಯಕತೆ ರಾಸಬಿಹಾರಿಯವರಿಗಿತ್ತು. ಆಗ ರಾಸಬಿಹಾರಿಯವರು "ನಾಪತ್ತೆಯಾದವರೆಂ"ದು ಸಾರಲ್ಪಟ್ಟವರಾಗಿದ್ದರೂ ಅವರ ಭೆಟ್ಟಿಗೆಂದು ಹೋದರು. ಪೋಲೀಸರ ಕೈಯಲ್ಲಿ ಸಿಗತಕ್ಕವರೇ. ಆದರೆ ಅಮೀರಚಂದರ ಸಹಕಾರಿಯೊಬ್ಬನು ಅವರನ್ನು ಪಾರು ಮಾಡಿದನು. ೧೯೧೨ರಲ್ಲಿ ಹಿಂದುಸ್ತಾನದ ರಾಜ ಪ್ರತಿನಿಧಿಯಾಗಿದ್ದ ಲಾರ್ಡ ಹಾರ್ಡಿಂಜರ ಮೇಲಾದ ಬಾಂಬು ದಾಳಿಯಲ್ಲಿ ರಾಸಬಿಹಾರಿಗಳ ಕೈವಾಡವಿಲ್ಲದಿರಲಿಲ್ಲ. ಗೂಢಚಾರಿಗಳು ಎಷ್ಟೊಂದು ಕಷ್ಟಪಟ್ಟರೂ ಅವರ ಕೈಗೆ ಸಿಕ್ಕದೆ ಇವರು ಎಷ್ಟೋ ವರ್ಷ ಕಾಶಿಯಲ್ಲಿರುತ್ತಿದ್ದರು.

ಮೇಲ್ಕಾಣಿಸಿದ ರೌಲಟ್ ಸಮಿತಿಯ ವರದಿಯಿಂದ ಇನ್ನೂ ತಿಳಿದು ಬರುವದೇನಂದರೆ—

"೧೯೧೪ರಲ್ಲಿ ದಿಲ್ಲಿ ಮತ್ತು ಲಾಹೋರ ಒಳಸಂಚಿನ ರಾಸಬಿಹಾರೀ 'ಬಸೂ' ಕಾಶಿಗೆ ಬಂದರು. ಮತ್ತು ಅಲ್ಲಿಯ ಅಂದೋಲನದ ಸೂತ್ರ ಗಳನ್ನು ತಮ್ಮ ಕೈಗೆ ತೆಗೆದುಕೊಂಡರು. ಅವರನ್ನು ಹಿಡಿದು ಕೊಟ್ಟವರಿಗೆ ಬಹುಮಾನವನ್ನಿಟ್ಟಾಗ್ಯೂ, ಹಿಂದುಸ್ತಾನದಲ್ಲೆಲ್ಲ ಜಾಹೀರು ರೀತಿಯಿಂದ ಅವರ ಛಾಯಾ ಚಿತ್ರವನ್ನು ಪ್ರಕಟಿಸಿದಾಗ್ಯೂ ಅದನ್ನು ಗಮನಿಸದೆ ಅವರು ೧೯೧೪ರಲ್ಲಿ ಸುಮಾರು ೧ ವರ್ಷದ ವರೆಗೂ ಕಾಶಿಯಲ್ಲಿಯೇ ಗುಪ್ತವಾಗಿ ವಾಸಿಸುವದರಲ್ಲಿ ಯಶಸ್ಸನ್ನು ದೊರೆಕಿಸಿದರು. ಆ ಕಾಲಕ್ಕೆ ಅವರು "ಜಂಗಾಲೀ ಟೋಳಾ"ಯೆಂಬ ಭಾಗದಲ್ಲಿ ಇರುತ್ತಿದ್ದರು. ರಾತ್ರಿ ಬೈಲಲ್ಲಿ ವ್ಯಾಯಾಮ ಮಾಡುತ್ತಿದ್ದರು. ಸಚ್ಚಿಂದ್ರರ ಗುಂಪಿನವರನೇಕರು ಇವರ ಕಡೆಗೆ ಬರುತ್ತಿದ್ದರು. ಇಂಥದೇ ಒಂದು ಸಮಯದಲ್ಲಿ ಅವರು ಬಾಂಬು ಮತ್ತು ಪಿಸ್ತೂಲುಗಳನ್ನು ಉಪಯೋಗಿಸುವ ಪ್ರಯೋಗಗಳನ್ನು ಮಾಡಿ

ತೋರಿಸಿದರು. ೧೮ನೇ ನವಂಬರ್ ೧೯೧೪ನೇ ರಾತ್ರಿ ಎರಡು ಸ್ಫೋಟಕ ಚೆಂಡುಗಳು ಅಂಗೈಯಲ್ಲಿರುವಾಗಲೇ ಸ್ಫೋಟವಾಗಿ ಅವರಿಗೂ ಸಚ್ಚೀಂದ್ರರಿಗೂ ಗಾಯಗಳಾದವು. ಆ ನಂತರ ಅವರು ಬಂಗಾಲೀ ಟೋಳಾದಲ್ಲಿಯೇ ಮತ್ತೊಂದು ಮನೆಗೆ ಇರಲಿಕ್ಕೆ ಹೋದರು.

"ಅಲ್ಲಿ ಇವರಿಗೆ ವಿಷ್ಣು ಗಣೇಶ ಪಿಂಗಳೆಯೆಂಬ ಮಹಾರಾಷ್ಟ್ರೀಯ ಯುವಕರೊಬ್ಬರ ಪರಿಚಯವಾಯಿತು. ಪಿಂಗಳೆ ತಳೇಗಾಂವದ ಹತ್ತಿರದ ಧಮಧೇರೆ ಊರಿನವರು. ಅವರು ಅಮೇರಿಕೆಗೆ ಹೋಗಿ ಬಂದಿದ್ದರು. ಅಲ್ಲಿಂದ ನವೆಂಬರ್ ೧೯೧೪ರಲ್ಲಿ 'ಗದರ್ ಪಕ್ಷ'ದ ಎಷ್ಟೋ ಶೀಖರನ್ನು ಕರೆದುಕೊಂಡು ವಾಪಸು ಬಂದಿದ್ದರು. ಅಮೇರಿಕೆಯಿಂದ ಬಂಡು ಮಾಡುವದಕ್ಕಾಗಿ ನಾಲ್ಕು ಸಾವಿರ ಜನರು ಬಂದಿರುವರೆಂದೂ ಬಂಡು ಆರಂಭವಾದೊಡನೆ ಇನ್ನೂ ಇಪ್ಪತ್ತು ಸಾವಿರ ಜನರು ಬರಲೊಪ್ಪಿದ್ದಾರೆಂದೂ ಪಿಂಗಳೆಯವರು ಹೇಳಿದರು.

"ಜನೆವರಿ ೧೯೧೫ರಲ್ಲಿ ರಾಸಬಿಹಾರಿಯವರು ತಮ್ಮ ಗುಂಪಿನ ಅವಸರದ ಸಭೆಯನ್ನು ಕರೆದರು. ಆಗ ಕೂಡಿದ ಜನಸಮುದಾಯಕ್ಕೆ, "ಬೇಗನೆ ದೊಡ್ಡದೊಂದು ಬಂಡು ಏಳುವದಿದೆ. ಸ್ವದೇಶಕ್ಕಾಗಿ ನೀವೆಲ್ಲರೂ ಸರ್ವಸ್ವವನ್ನೂ ಹೋಮ ಮಾಡಲು ಸಿದ್ಧರಾಗಿರಬೇಕು" ಎಂದು ಸಂದೇಶವನ್ನು ಕೊಟ್ಟರು. ದಾಮೋದರ ಸ್ವರೂಪನೆಂಬ ಶಾಲಾ ಶಿಕ್ಷಕನು ಅಲಹಾಬಾದದಲ್ಲಿಯ ಕೆಲಸದ ಮುಂದಾಳುತ್ವವನ್ನು ವಹಿಸಬೇಕೆಂದೂ, ರಾಸ-ಬಿಹಾರಿಯವರು ಸಚ್ಚೀಂದ್ರ ಮತ್ತು ಪಿಂಗಳೆಯವರ ಸಹಕಾರದೊಂದಿಗೆ ಲಾಹೋರದ ಕಾರ್ಯದ ನೇತೃತ್ವವನ್ನು ವಹಿಸಬೇಕೆಂದೂ ನಿರ್ಣಯವಾಗಿತ್ತು. ಬಂಗಾಲದಿಂದ ಬಾಂಬುಗಳನ್ನು ತರುವದಕ್ಕಾಗಿ ಬೇರೆ ಇಬ್ಬರು ನಿಯಮಿಸಲ್ಪಟ್ಟಿದ್ದರು. ವಿಭೂತಿ ಮತ್ತು ಪ್ರಿಯಾನಾಥರು ಕಾಶಿಯಲ್ಲಿಯ ಬೇರೆಯವರು ಜಬ್ಬಲಪೂರದಲ್ಲಿಯ ಸೈನಿಕರಲ್ಲಿ ಒಡಕು ಹುಟ್ಟಿಸುವದೆಂದು ನಿರ್ಣಯವಾಗಿತ್ತು."

೨೧ ಫೆಬ್ರುವರಿ ೧೯೧೫ ಬಂಡಿನ ದಿನವೆಂದು ನಿಶ್ಚಿತವಾಗಿತ್ತು. ಆ ವೇಳೆಗೆ ಅಲ್ಲಲ್ಲಿಯ ಸೂತ್ರಧಾರರು ಪ್ರಸನ್ನಚಿತ್ತರಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಕಾಯ್ದುಕೊಂಡಿದ್ದರು. ಆದರೆ ಈ ಒಳಸಂಚಿನ ವಾರ್ತೆಯು

ಸರಕಾರದ ಹಸ್ತಕರ ಮೂಲಕ ಪಂಜಾಬದ ಗವರ್ನರರಾದ ಮಾಯಕೇಲ ಒಡ್ವಾಯರರಿಗೆ ಮೊದಲೇ ಗೊತ್ತಾಗಿಹೋಯಿತು. ಸಂಚಿನ ಸೂತ್ರಧಾರರೆಲ್ಲ ಬಂಧಿಸಲ್ಪಟ್ಟರು. ರಾಸಬಿಹಾರಿ ಮತ್ತು ಪಿಂಗಳೆಯವರು ಮಾತ್ರ ಕಾಶಿಗೆ ವಾಪಸು ಬಂದರು. ಮುಂದೆ ಮಾರ್ಚ ೨೩ಕ್ಕೆ ಪಿಂಗಳೆಯವರು ಮಿರಾರತ ದಲ್ಲಿಯ ೧೨ನೇ ಹಿಂದೀ ಕುದುರೆ ದಳದ ವಿಭಾಗದ ಹತ್ತಿರ ಕೈಸೆರೆ ಸಿಕ್ಕರು. ಆಗ ಅವರ ಹತ್ತಿರ ಅರ್ಧಕ್ಕರ್ಧ ಸೈನ್ಯವನ್ನೇ ನಾಶಮಾಡಿ ಬಿಡುವಷ್ಟು ಸಾಮರ್ಥ್ಯವುಳ್ಳ ಹತ್ತು ಬಾಂಬುಗಳು ಸಿಕ್ಕವಂತೆ. ಆ ಮೇಲೆ ಅವರಿಗೆ ಲಾಹೋರ ಒಳಸಂಚಿನ ಬಗ್ಗೆ ಫಾಶೀ ಶಿಕ್ಷೆ ಕೊಡಲಾಯಿತು!!

ಕಾಲಟ್ ವರದಿಯಂತೆ "ಈ ಮೊದಲು ರಾಸಬಿಹಾರಿಯವರು ಅಮೃತಸರದಲ್ಲಿರುತ್ತಿದ್ದರು. ಹಳ್ಳಿಯ ಜನರನ್ನು ಬಂಡಿಸಲ್ಲಿ ಭಾಗವಹಿಸಲು ಹುರಿದುಂಬಿಸುತ್ತಿದ್ದರು. ಆ ಕಾಲಕ್ಕೆ 'ಬಾಂಬು ಸಿದ್ಧವಾಗಿದ್ದವು. ಧ್ವಜವ ಸಿದ್ಧತೆಯಾಗಿತ್ತು. ಶಸ್ತ್ರಾಸ್ತ್ರಗಳ ಸಂಗ್ರಹವಾಗಿತ್ತು. ರೈಲು, ತಂತಿ ಕಂಬ ಗಳನ್ನು ಉಧ್ವಸ್ತ ಮಾಡುವ ಸಾಧನಗಳೂ ಜೋಡಣೆಯಾಗಿದ್ದವು. ಈ ಒಳಸಂಚುಗಾರರು ಒಂದೇ ಕಾಲಕ್ಕೆ ಲಾಹೋರ, ಕಾಶಿ, ಜಬ್ಬಲ್‌ಪುರ, ರಾವಳಪಿಂಡಿ, ಡಾಕ್ಕಾ ಮೊದಲಾದ ಕಡೆಗೆಲ್ಲ ದಂಗೆಯೇಳುವವರಿದ್ದರು." ಆದರೆ ೧೯—೨—೧೯೧೫ನೇ ದಿನವೇ ರಾಸಬಿಹಾರಿಯವರ ಛಾವಣಿಗೆ ಮುತ್ತಿಗೆ ಹಾಕಿದ್ದರಿಂದ ಒಳಸಂಚಿನ ಇತಿಶ್ರೀ ಆಯಿತು. ರಾಸಬಿಹಾರಿ ಯವರು ಮಾತ್ರ ಆಗಲೂ ಪಾರಾಗಿಹೋದರು. ಮಾಯಕೇಲ ಒಡ್ವಾಯರರ ಅಂಗರಕ್ಷರನ್ನು ಕೂಡ ನಮ್ಮ ಪಕ್ಷಕ್ಕೆ ಸೇರಿಸಿಕೊಂಡಿದ್ದರೆಂದಬಳಿಕ ಅವರ ಸಂಘಟನಾ ಚಾತುರ್ಯದ ಬಗ್ಗೆ ಹೆಚ್ಚಿಗೆ ಹೇಳುವದವಶ್ಯವಿಲ್ಲ!

ಕೊನೆಯ ಭೆಟ್ಟಿಯೆಂದು ಸಿಕ್ಕ ಕೆಲವು ಅನುಯಾಯಿಗಳನ್ನು ಮಾತ ನಾಡಿಸಿದರು. 'ನಾನು ಎರಡು ವರ್ಷ ಗುಡ್ಡ ಬೆಟ್ಟಗಳಲ್ಲಿ ಅಲೆದಾಡುತ್ತೇನೆ. ಆ ಮೇಲೆ ವಾಪಸು ಬರುತ್ತೇನೆ' ಎಂದು ಹೇಳಿ ತಮ್ಮ ಕಾರ್ಯವನ್ನು ನೆರವೇರಿಸುತ್ತಿರಲು ಎಲ್ಲರನ್ನೂ ಬಿಸ್ಮಯಿಸಿಕೊಂಡು ಹಿಂದುಸ್ತಾನದ ಗಡಿ- ಯನ್ನು ದಾಟಿದರು. ಟೋಕಿಯೋಕ್ಕೆ ಹೋದರು. ಅವರನ್ನು ತಮ್ಮ ವಶಕ್ಕೆ ಕೊಡಬೇಕೆಂದು ಬ್ರಿಟಿಷ ಸರಕಾರದವರು ಜಪಾನ ಸರಕಾರವನ್ನು ಕೇಳಿದರು. ಜಪಾನರು ಆ ರೀತಿ ನಡೆಯುವ ವಿಚಾರದಲ್ಲಿಯೂ ಇದ್ದರು. ಮಾರ್ಸೆಲ್ಸ್

ವಲ್ಲಿ ಬ್ಯಾ. ಸಾವರಕರರ ದುರ್ದೈವೀ ಕೈಸೆರೆಯು ಇತಿಹಾಸದ ಪುನರಾವೃತ್ತಿಯಾಗುವ ಚಿನ್ಹಗಳು ತೋರತೊಡಗಿದವು. ಆದರೆ ಜಪಾನದ “ಬ್ಲ್ಯಾಕ್ ಡ್ರಗೂನ್” ಸಂಘಟನೆಯ ಪ್ರಮುಖನಾದ ಟೋಯಾಮಾ ಇವನು ಅವರಿಗೆ ತನ್ನ ನಿವಾಸಸ್ಥಾನದಲ್ಲಿಯೇ ಆಶ್ರಯ ಕೊಟ್ಟದ್ದರಿಂದ ಆ ಕುತ್ತು ಪಾರಾಯಿತು. ಟೋಯಾಮಾನ ವಿರುದ್ಧ ಜಪಾನ ಸರಕಾರವು ಹೋಗುವಂತಿರಲಿಲ್ಲ. ಶಾಂಘಾಯದಲ್ಲಿ ರಾಸಬಿಹಾರಿಯವರು ಕಳೆದ ಮಹಾಯುದ್ಧದಲ್ಲಿ ಜರ್ಮನಿಗೆ ಹಿಂದುಸ್ತಾನದಲ್ಲಿ ದಂಗೆಯೆಬ್ಬಿಸುವದಕ್ಕಾಗಿ ಹುರಿದುಂಬಿಸುತ್ತಿದ್ದರೆಂಬ ಸಂಶಯದ ಮೇಲಿಂದ ಬ್ರಿಟಿಷ್ ಸರಕಾರವು ಅವರನ್ನು ಅಲ್ಲಿಂದ ಹೊರಗಟ್ಟಿಸಬೇಕೆಂದು ಸ್ಥಾನಿಕ ಸರಕಾರವನ್ನು ಕೇಳಿಕೊಂಡಿತ್ತು. ಇದಾದಮೇಲೆ ಎಂಟು ವರ್ಷಗಳವರೆಗೆ ಅವರು ಅಜ್ಞಾತವಾಸದಲ್ಲಿದ್ದರು.

ಟೋಕಿಯೋದಲ್ಲಿ ರಾಸಬಿಹಾರಿ ಘೋಷರು ‘ಸ್ವತಂತ್ರ ಹಿಂದುಸ್ತಾನ ಸಂಘ’ವನ್ನು ಸ್ಥಾಪಿಸಿದ್ದರು. ಅವರು ಜಪಾನೀ ಸ್ತ್ರೀಯನ್ನು ಮದುವೆಯಾಗಿದ್ದರು. ಅವರ ಲೆಕ್ಕಣಿಕೆ ಒಳ್ಳೇ ಹರತಾದದ್ದು. ಹಿಂದುಸ್ತಾನದ ಬಗ್ಗೆ ಜಪಾನೀ ಭಾಷೆಯಲ್ಲಿ ಅವರು ಅನೇಕ ಗ್ರಂಥಗಳನ್ನು ಬರೆದಿರುವರು. ಸ್ವತಃ ಒಂದು ಪತ್ರಿಕೆಯನ್ನೂ ಹೊರಡಿಸುತ್ತಿದ್ದರು. ಟೋಕಿಯೋದಲ್ಲಿನ ತಾತ್ಪೂರ್ತಿಕ ಸ್ವತಂತ್ರ ಹಿಂದುಸ್ತಾನ ಸರಕಾರದ ಮುಖ್ಯ ಸಲಹೆಗಾರ ಮಂತ್ರಿಗಳಾಗಿದ್ದರು.

ಮೂವತ್ತು ವರ್ಷಕಾಲ ತಮ್ಮ ಪ್ರಿಯ ಮಾತೃಭೂಮಿಯ ವಿರಹ ತಾಪದಿಂದ ಬಳಲಿದ ಕ್ರಾಂತಿಕಾರರಾದ ರಾಸಬಿಹಾರಿಯವರು ಟೋಕಿಯೋದಲ್ಲಿ ನಿಧನ ಹೊಂದಿದರು. ಅವರು ಆಚರಿಸಿದ ಸಶಸ್ತ್ರ ಹೋರಾಟದ ಪ್ರಚಾರ ಮಾಡುವದು ನಮ್ಮ ಉದ್ದೇಶವಾಗಿಲ್ಲ. ಇತಿಹಾಸವೆಂದು ಮೇಲ್ಕಾಣಿಸಿದ ಸಂಗತಿಗಳನ್ನೆಲ್ಲ ತಿಳಿಸಿದ್ದೇವೆ.

# ಕ್ಯಾ. ಲಕ್ಷ್ಮಿ

●

ಆಜಾದ ಹಿಂದ ಸೇನೆಯ 'ಝಾಂಸೀ ಲಕ್ಷ್ಮಿಬಾಯಿ ದಳ'ದ ಮುಖ್ಯಾಧಿಕಾರಿಣಿ ಕ್ಯಾಪ್ಟನ್ ಲಕ್ಷ್ಮಿ ದೇವಿಯವರ ಹೆಸರು ಇಂದು ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ ಆಬಾಲವೃದ್ಧರ ನಾಲಗೆಯ ಮೇಲೆ ನಲಿದಾಡುತ್ತಿದೆ. ಇವರ ಅಧಿಕಾರದ ಸ್ಥಾನ ಲೆಫ್ಟಿನಂಟ್ ಕರ್ನಲ್. ಅದನ್ನು ಒಪ್ಪದೆ ಕ್ಯಾಪ್ಟನ್ ಸ್ಥಾನವೆ ತಮಗೆ ಯೋಗ್ಯವೆಂದು ಹೇಳಿದರು ಮತ್ತು ಕ್ಯಾಪ್ಟನ್ ಲಕ್ಷ್ಮಿಯೆಂದೇ ಹೆಸರು ಪಡೆದರು. ಈ ನಾರೀರತ್ನದ ಇತಿಹಾಸದ ಮೇಲೆ ಪರದೆಯನ್ನು ಎಳೆಯಲಾಗಿತ್ತು. ಈಗ ಅದು ದೂರ ಸರಿದಿದೆ. ಆದುದರಿಂದ ಈ ತೇಜಸ್ವಿನಿಯ ತೇಜಸ್ವಿನ ಕತೆಯನ್ನು ತಿಳಿಯಲು ಅನುಕೂಲವಾಗಿದೆ. ಸರಕಾರವು ಇವರನ್ನು ಕಾಲವ ಎಂಬಲ್ಲಿ ಸ್ಥಾನಬದ್ಧ ಮಾಡಿದೆ. ಇವರು ಕೊನೆಯ ವರೆಗೂ ಹೋರಾಡಿ ಬ್ರಿಟಿಶರ ಕೈಸೆರೆಯಾದರು. ಕಾಲವ ಎಂಬಲ್ಲಿಗೆ ಹೋಗುವುದಕ್ಕೆ ಆಜ್ಞೆಯು ಕೈಗೆ ಬಂದಾಗ ಇವರು ರಂಗೂನದ ಆಸ್ಪತ್ರೆಯಲ್ಲಿ ಆಜಾದ ಹಿಂದ ಸೇನೆಯ ಸೈನಿಕರ ಮತ್ತು ಹೆಂಡಿರು ಮಕ್ಕಳ ಸೇವೆಯಲ್ಲಿ ನಿರತರಾಗಿದ್ದರು. ರಂಗೂನನ್ನು ಬಿಟ್ಟೇ ಹೋಗಬೇಕಾದ ಪ್ರಸಂಗ ಬಂದಲ್ಲಿ ತಾವು ಬೇರೆ ಕಡೆಗೆ ಹೋಗುವುದಕ್ಕಿಂತ ತಾಯ್ನಾಡ ಕಡೆಗೇ ಹೋಗುವೆನೆಂದು ಹೇಳಿದರು.

ನಾಲ್ಕು ದಿನಗಳ ನಂತರ ಪುನಃ ಇವರಿಗೆ ಆಜ್ಞೆ ಬಂದಿತು. ಮರುದಿನವೇ ಮಿಲಿಟರಿ ಮೋಟಾರು ಮನೆಯ ಮುಂದೆ ಬಂದು ನಿಂತಿತು. ಮತ್ತು ಮಿಂಗಲ್ಡನ್ ವಿಮಾನ ನಿಲ್ದಾಣಕ್ಕೆ ಒಯ್ದಿತು. ಅಲ್ಲಿಂದ ವಿಮಾನ ಮಾರ್ಗವಾಗಿ ಮೈಕ್ತಿಗೆ ಒಯ್ದು ಮಿಲಿಟರಿ ಮೋಟಾರಿನಲ್ಲಿ ಕಾಲವಕ್ಕೆ ಒಯ್ದು ಬಿಡಲಾಯಿತು. ದಾರಿಯುದ್ದಕ್ಕೂ ಜಪಾನರಿದ್ದುದರಿಂದ ಸುಮಾರು ನೂರು ಮೈಲಿನಷ್ಟು ನಡೆಯಿಸಿಕೊಂಡೇ ಇವರನ್ನು ಒಯ್ದಿದ್ದರು. ಈ ಭಾರತ ಲಕ್ಷ್ಮಿಯವರು ಎಷ್ಟೊಂದು ಕೆಚ್ಚೆದೆಯವರಾಗಿದ್ದರೆನ್ನಲಿಕ್ಕೆ ಬ್ರಿಟಿಷ್

ಮೇಜರರು ಹಾಕಿದ ಪ್ರಶ್ನೆಗಳಿಗೆ ಇವರು ಕೊಟ್ಟ ಉತ್ತರಗಳೇ ಸಾಕ್ಷಿಯಾಗಿವೆ. ತಮ್ಮ ಸೇನೆಯ ಇತರ ಮಹಿಳೆಯರನ್ನು ಮೇಜರರು ಅಡ್ಡತಿಡ್ಡ ಪ್ರಶ್ನೆಗಳಿಂದ ಪೀಡಿಸುವದನ್ನು ಕಂಡು, "ನಿಮಗೆ ಅಕ್ಕ ತಂಗಿಯರು ಅಥವಾ ಕುಮಾರಿಯರು ಇಲ್ಲವೆ? ನಿಮಗುತ್ತರ ಕೊಡಲು ನಾನಿರುವಾಗ ಅವರನ್ನೇಕೆ ಪೀಡಿಸುವಿರಿ? ನಾನಿರುವೆ ಅವರ ಕಮಾಂಡರ್. ನನಗೆ ಏನೆಲ್ಲವನ್ನೂ ಕೇಳಿರಿ" ಎಂದುಬಿಟ್ಟರು.

"ನಿಮಗೆ ಶಸ್ತ್ರಗಳನ್ನು ಉಪಯೋಗಿಸುವದು ಗೊತ್ತಿದೆಯೆ?"

"ಹೌದು! ಚೆನ್ನಾಗಿ ಬಲ್ಲೆ!"

"ಯಾವ ಯಾವ ಶಸ್ತ್ರಗಳನ್ನು"

"ಪಿಸ್ತೂಲು, ರಿವಾಲ್ವರ್, ಟೊಮ್ಮಿಗನ್, ಆಟ್ಟೆನ್‌ಗನ್...."

ಲಕ್ಷ್ಮಿಯವರ ಮಾತನ್ನು ಕೇಳಿ ಮೇಜರನು ಬೆಚ್ಚಿದನು. ಬ್ರಿಟಿಷ ಮೇಜರನೊಬ್ಬ ಕೇಳಿದ, "ನಿಮ್ಮನ್ನು ನಾನು ರಣರಂಗದಲ್ಲೇ ಇದಿರಿಸುತ್ತಿದ್ದರೆ ಆಗೇನು ಮಾಡುತ್ತಿದ್ದಿರಿ?"

ಲಕ್ಷ್ಮಿಯೆಂದರು "ಗುಂಡಿಕ್ಕಿ ಕೊಲ್ಲುತ್ತಿದ್ದೆ."

ಆಗಸ್ಟ ಅಂತ್ಯದಲ್ಲಿ ಕ್ಯಾ. ಲಕ್ಷ್ಮಿಯವರ ಮೇಲಿನ ನಿರ್ಬಂಧಗಳನ್ನೆಲ್ಲ ತೆಗೆದುಹಾಕಿದರು.

ಆ ಬಳಿಕ ಇವರು ಅಕ್ಟೋಬರ್ ೨ನೇ ತಾರೀಖಿನ ದಿವಸ ಮಹಾತ್ಮಾ ಗಾಂಧಿಯವರ ಹುಟ್ಟು ಹಬ್ಬದ ನಿಮಿತ್ತವಾಗಿ ಸೇರಿದ ಪ್ರಚಂಡ ಸಭೆಯಲ್ಲಿ ಉಜ್ವಲ ಭಾಷಣವನ್ನು ಮಾಡಿದರು. ಇದರಿಂದ ರಂಗೂನದಲ್ಲಿದ್ದ ಮಿಲಿಟರಿ ಅಧಿಕಾರಿಗಳು ಹೌಹಾರಿದರು. ಶಾಂತತೆಯು ಉಳಿಯದೆಂಬ ಭೀತಿಯಾಯಿತು ಅವರಿಗೆ. ಬಳಿಕ ಮೂರು ವಾರಗಳ ನಂತರ ಅಕ್ಟೋಬರ್ ಇಪ್ಪತ್ತೊಂದನೆಯ ತಾರೀಖಿನ ದಿನ 'ಆಜಾದ ಹಿಂದ ಸರಕಾರ ದಿನ'ವು ರಂಗೂನಿನಲ್ಲಿ ಆಚರಿಸಲ್ಪಟ್ಟಿತು. ಆಗ ಲಕ್ಷ್ಮಿಯವರು ಲೆಫ್ಟಿನಂಟ್ ಕರ್ನಲ್ ವೇಷವನ್ನು ಧರಿಸಿ ಅಪಾರ ಜನಸಮುದಾಯದ ಎದುರಿಗೆ ಅಖಂಡ ಹುರುಪಿನ ಭಾಷಣ ಮಾಡಿದರು. ಆ ಭಾಷಣದಿಂದ ಅಧಿಕಾರಿಗಳ ಗುಂಪಿನಲ್ಲಿ ತಳಮಳವುಂಟಾಯಿತು. ಇವರ ಭಾಷಣವೆಂದರೆ ಅಷ್ಟು ಸ್ಫೂರ್ತಿದಾಯಕವಾದದ್ದು. ೫ನೆಯ ನವ್ಹಂಬರ ದಿನ ಕೆಂಪು ಕೋಟೆಯಲ್ಲಿ ಆಜಾದ ಹಿಂದ

ಸೈನಿಕರ ವಿಚಾರಣೆಯು ಸುರುವಾಯಿತು. ಪ್ರಚಂಡ ಸಭೆಯಲ್ಲಿ ಅದರ ನಿಷೇಧವನ್ನು ಇವರು ಮಾಡಿದರು.

ಅತ್ಯಂತ ಪ್ರಕ್ಷುಬ್ಧ ಕಾಲದಲ್ಲಿ ಯಾವ ಆಜಾದ ಹಿಂದ ಸೈನಿಕರ ಸೇವೆ ಶುಶ್ರೂಷೆಯ ಮಾರ್ಗವನ್ನು ಇವರು ಹಿಡಿದರೊ ಅದರನ್ನು ಬಿಟ್ಟು ಅಗಲುವ ಪ್ರಸಂಗ ಬಂದಾಗ ಇವರ ಕಣ್ಣುಗಳಲ್ಲಿ ಕಂಬನಿಗಳು ತುಂಬಿ ಬಂದವು. ಆಗಿನ ನೋಟ ಕರುಣೆಯ ಕಾಸಾರದ ನೋಟ. ಇವರ ಕಂಠ ಬಿಗಿದು ಬಂದಿತು. ಇವರೆಂದರು, ಇನ್ನು ನೀವು ಬೇರೆ ಡಾಕ್ಟರರ ಸಹಾಯ ತೆಗೆದು ಕೊಳ್ಳಿರಿ." ಸೈನಿಕರು ಸ್ತಬ್ಧರಾಗಿ ನಿಂತಿದ್ದರು. ಡಾಕ್ಟರ ಲಕ್ಷ್ಮಿಯವರು ತಮ್ಮ ಕೈಯೊಳಗಿನ ಬೆಲೆಯುಳ್ಳ ಉಂಗುರವನ್ನು ತೆಗೆದುಕೊಟ್ಟು "ಇದನ್ನು ನನ್ನ ತಾಯಿಗೆ ಮುಟ್ಟಿಸಿರಿ" ಎಂದರು. ಸೈನಿಕರು "ನೀವು ನಮಗೆ ಇನ್ನೆಂದು ದರ್ಶನ ಕೊಡುವಿರಿ ತಾಯೀ" ಎಂದು ಕೇಳಿದರು. "ಬಹುಶಃ ಸ್ವತಂತ್ರ ಹಿಂದುಸ್ತಾನದಲ್ಲಿ" ಎಂದು ಉತ್ತರಿಸುವಾಗ ಅವರ ನಯನಗಳು ನೀರುದುಂಬಿದವು. ವೀರಮತಿ ಲಕ್ಷ್ಮಿಯವರ ಚರಿತ್ರೆಯು ಹೀಗಿದೆ. "ಬ್ರಿಟಿಶರ ಪಕ್ಷಗಟ್ಟಿ ಹೋರಾಡಬೇಕೆಂಬ ಮಾತು ನನ್ನ ಕನಸಿನಲ್ಲಿಯೂ ಬಂದಿಲ್ಲ. ನಾನು ಇದು ವರೆಗೆ ಸಹ ಆಜಾದ ಹಿಂದ ಸೇನೆಯ ಸೈನಿಕೆ ಇರುವೆ. ಇದಕ್ಕಾಗಿ ನನಗೆ ಅಭಿಮಾನವೆನಿಸುತ್ತದೆ." ಎಂದು ಮೊನ್ನೆ ಮೊನ್ನೆ ಅವರು ಉದ್ಗಾರ ತೆಗೆದಿರುವರು.

ಮಹಾವಿಕರಾಳ ಈ ಮಹಾಯುದ್ಧವು ಈ ನಾರೀ ರತ್ನವನ್ನು ಹಿಂದುಸ್ತಾನಕ್ಕೆ ಸಲ್ಲಿಸಿತು, ಆದರೆ, ಹದಿನೈದು ವರುಷದ ಹಿಂದೆ, ಹಿಂದುಸ್ತಾನದ ಸಾಮಾಜಿಕ ಹಾಗೂ ರಾಜಕೀಯ ಆಂದೋಲನದ ಮೇಲೆ ಮಹಾಯುದ್ಧದ ನೆರಳು ಬೀಳದೆ ಹೋಗಿದ್ದರೆ, ಆಗ ಉಟಕಮಂಡದ ಪೇಟೆಯಲ್ಲಿ ಮೋಟಾರಿನಲ್ಲಿ ಸುಂದರ ಮುಂಗುರುಳಿನ, ಉಜ್ವಲ ನಯನಗಳ, ನಸುನಗೆಯ, ಸದಾ ಆನಂದದಿಂದ ಅಲೆದಾಡುವ ಲಕ್ಷ್ಮೀದೇವಿಯವರನ್ನು ಕಾಣುತ್ತಿದ್ದೆವು. ಇವರು ಒಂದು ಒಳ್ಳೆ ಮನೆತನದ ಸುಂದರ ಸೊಸೆಯಾಗಿ ಜೀವನ ಸಾಗಿಸಬಹುದಾಗಿತ್ತು. ಆದರೆ, ಇವರ ಇತಿಹಾಸವು ಜಗತ್ತಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡಬೇಕಾಗಿತ್ತು. ಆದ್ದರಿಂದ ಕಾಲವು ಇವರನ್ನು ಸ್ವತಂತ್ರ ಭಾರತದ ನಿರ್ಮಾಣ ಕಾರ್ಯಕ್ಕೆ ನೂಕಿತು.

ಲಕ್ಷ್ಮಿಯವರ ತಂದೆ ಮದ್ರಾಸದ ಪ್ರಖ್ಯಾತ ಬ್ಯಾರಿಸ್ಟರ ಸ್ವಾಮಿನಾಥನ್ ಅವರು. ಈಸಲ ಕೇಂದ್ರ ಅಸೆಂಬ್ಲಿಗೆ ಮದ್ರಾಸ್ ನಗರದಿಂದ ಕಾಂಗ್ರೆಸ್ ಪರವಾಗಿ ಆರಿಸಿ ಬಂದಿರುವ ಶ್ರೀಮತಿ ಅಮ್ಮು ಸ್ವಾಮಿನಾಥರೇ ಲಕ್ಷ್ಮಿಯವರ ತಾಯಿ. ಮದ್ರಾಸದಲ್ಲಿ ಸ್ವಾಮಿನಾಥನ್ ಅವರ ಮನೆಯೆಂದರೆ ಚಿತ್ರಕಾರರ, ಸಂಗೀತ ವಿಶಾರದರ, ಸಮಾಜ ಸೇವಕರ, ದೇಶಭಕ್ತರ ರಮ್ಯ ಪ್ರಸಾದ. ಲಕ್ಷ್ಮಿಯವರಿಗೆ ಇವರೆಲ್ಲರ ಪರಿಚಯದಿಂದ ಧಿಟ್ಟತನ ಬಂದಿತು. ತಾಯಿಯೊಡನೆ ಒಮ್ಮೆ ಪ್ರವಾಸ ಮಾಡುವ ಪ್ರಸಂಗ ಬಂದಾಗ ಇವರು ಮೊದಲನೆಯ ತರಗತಿಯಲ್ಲಿ ಪ್ರವಾಸಮಾಡುತ್ತಿರುವ ಕೃಷ್ಣಮೂರ್ತಿಯವರನ್ನು ಬಲವಾಗಿ ಟೀಕಿಸಿದರು. ಆದರಿಂದಾಗಿ ಶ್ರೀ. ಕೃಷ್ಣಮೂರ್ತಿ ಅವರು 'ನಿಮ್ಮ ಸ್ಥಳಕ್ಕೆ ನಾನು ಹೋಗುತ್ತೇನೆ, ನನ್ನ ಸ್ಥಳಕ್ಕೆ ನೀವು ಬನ್ನಿರಿ' ಎಂದು ಹೇಳಬೇಕಾಯಿತು.

ಪ್ರವಾಸ, ಆಟ–ಪಾಟಗಳಲ್ಲಿ ಕ್ಯಾಪ್ಟನ್ ಲಕ್ಷ್ಮಿಯವರ ಜೀವನವು ಕಳೆಯುತ್ತಿತ್ತು. ಮೋಟಾರನ್ನು ಅತ್ಯಂತ ವೇಗದಿಂದ ನಡೆಸುವುದೆಂದರೆ ಅವರಿಗೆ ಬಲು ಇಷ್ಟ. ಅದಕ್ಕಾಗಿ ಪೋಲೀಸರಿಂದ ಕೆಲವು ಸಲ ತಡೆಹಿಡಿಯಲ್ಪಡಬೇಕಾಯಿತು. ಇಂಟರ್ ಪರೀಕ್ಷೆಯನ್ನು ಪಾಸಾಗುವ ಹೊತ್ತಿಗೆ ಇವರ ದೇಹದಲ್ಲಿ ನವತಾರುಣ್ಯವು ಕುಣಿಯತೊಡಗಿತು. ಇವರ ಸೌಂದರ್ಯವನ್ನು ಕಂಡು ಅನೇಕ ಜನ ಆಯ್. ಸಿ. ಎಸ್‌ರೂ ಕಾಲೇಜುಗಳ ಪ್ರಿನ್ಸಿಪಾಲರೂ ಕೈಹಿಡಿಯ ಬಯಸಿದರು. ಅದೇ ವೇಳೆಗೆ ಬಿ. ಕೆ. ನಂಜುಂಡ ರಾವ ಎಂಬ ವೈಮಾನಿಕನ ಪರಿಚಯವಾಯಿತು. ಆತನೂ ಸುಂದರ ತರುಣ. ಇಬ್ಬರೂ ವಿಮಾನದಲ್ಲಿ ಮನಸೋಕ್ತವಾಗಿ ಸಂಚರಿಸಿದರು. ಪ್ರೇಮವು ಬೆಳೆಯಿತು. ವಿಜೃಂಭಣೆಯಿಂದ ಮದುವೆಯೂ ಆಯಿತು. ಆದರೆ ಮದುವೆಯ ಕೊನೆಯು ಸುಖಮಯವಾಗಲಿಲ್ಲ. ಲಗ್ನವು ಮುರಿಯಿತು.

ಡಾಕ್ಟರ ಪದವಿಯನ್ನು ಸಂಪಾದಿಸಿದ ನಂತರ ಮನೆಯೆಂಬ ಕಾರಾಗ್ರಹದಲ್ಲಿರುವದಕ್ಕಿಂತ ಹೊರಬೀಳುವುದು ಲೇಸೆಂದು ಇವರು ಸಿಂಗಾಪುರದ ದಾರಿಯನ್ನು ಹಿಡಿದರು. ಅಲ್ಲಿ ದವಾಖಾನೆಯನ್ನು ತೆರೆದರು. ಅಲ್ಲಿ ರಾಸ ಬಿಹಾರಿ ಘೋಷರ ಹಿಂದುಸ್ಥಾನದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸ

ತೊಡಗಿದರು. ಸುಭಾಸ ಬೋಸರು ಸಿಂಗಾಪುರಕ್ಕೆ ಬಂದಂದಿನಿಂದ ಹೆಚ್ಚು ಹೆಚ್ಚು ಹೊಣೆಗಾರಿಕೆಯ ಕೆಲಸಗಳನ್ನು ಮಾಡತೊಡಗಿದರು.

ಒಂದು ದಿನ ಸಾಯಗಾಂವ ರೇಡಿಯೋ ಹಚ್ಚಿಕೊಂಡು ಕುಳಿತ ತಾಯಿಯೂ ಸೋದರಿಯೂ 'ಝಾಂಸಿ ಲಕ್ಷ್ಮಿಬಾಯಿ ಸೇನೆಯ ಸೇನಾನಿ ಲಕ್ಷ್ಮಿ' ಎಂದು ಸಾರಿದ ಸುದ್ದಿಯನ್ನು ಕೇಳಿದರು. ಆಗ ಅವರಿಗೆ ಆದ ಆನಂದವನ್ನು ವರ್ಣಿಸುವುದು ಈ ಲೆಕ್ಕಣಿಕೆಗೆ ಸಾಧ್ಯವಿಲ್ಲ.

---

## ದೇಶಕ್ಕಾಗಿ ಸಾಯುವೆವು

(ಆ. ಹಿಂ. ಸೈನ್ಯದಗೀತ)

ಹಮ್ ವತನಕೀ ಮುಹಬ್ಬತ್‌ಮೆ ಮರ್‌ಜಾಯಗೆ। ॥ಪಲ್ಲ॥
ಜಂಗೆ ಭಾರತಮೆ ಸೀನಾ ಸಿಪರ ಜಾಯಗೆ।
ಮತ್ ಯೇ ಸಮಝೋಕಿ ಧಮಕೀಸೆ ಡರಜಾಯಗೆ।
ಆಪ ದಿಖಲಾರಹೇಹೈ ಕಿಸೇ ಘುಡಕಿಯಾ,
ಯೇ ಓ ದರಿಯಾನಹಿ ಜೋ ಉತರ ಜಾಯಗೆ। ॥೧॥

ದೇಶ ಸೇವಾಮೆ ಜೀಸೆ ಗುಜರ ಜಾಯಗೆ।
ತೊ ಅಮರ ನಾಮ ದುನಿಯಾಮೆ ಕರ ಜಾಯಗೆ।
ತೀರಪರ ತೀರ ಬರಸೆ, ಹಟೇಂಗೇ ನಹಿ,
ಜೋಶ ಖಾಕರ ಯೇ ಸೀನೇ ಉಭರ ಜಾಯಗೆ। ॥೨॥

ಯೇ ನವೂಂಭೋ ಕಿ ಮರಕರ ಕಿಧರ ಜಾಯಗೆ।
ಯಾ ಇಧರ ಜಾಯಗೆ ಯಾ ಉಧರ ಜಾಯಗೆ।
ದೇಶ ಆಜಾದ ಕರನೇಮೆ ಏಕದೋ ನಹಿ,
ದೇಖ ಲೇನಾ ಹಜಾರೋಂಕೆ ಸರ್ ಜಾಯಗೆ॥ ॥೩॥

# ಸೇನಾಪತಿ ಭೋಸಲೆ

ಲೆಫ್ಟನಂಟ್ ಕರ್ನಲ್ ಜಗನ್ನಾಥರಾವ ಭೋಸಲೆಯವರು ೧೯೦೬ ರಲ್ಲಿ ಸಾವಂತವಾಡಿಯಿಂದ ೧೫ ಮೈಲಿನಾಚೆಗಿರುವ ತಿರೋಡೆಯೆಂಬಲ್ಲಿ ಹುಟ್ಟಿದರು. ತಿರೋಡೆಯ ಭೋಸಲೆ ಮನೆತನವು ಶಿವಾಜಿಯ ಕಾಲದಿಂದಲೂ ಇತಿಹಾಸ ಪ್ರಸಿದ್ಧವಾದುದು. ಅಂದಿನಿಂದಲೂ ಲಷ್ಕರೀ ಉದ್ಯೋಗ ವೆಂದರೆ ಆ ಮನೆತನಸ್ಥರಿಗೆ ಹೆಮ್ಮೆಯ ವಿಷಯವಾಗಿದೆ.

ಶ್ರೀ. ಜಗನ್ನಾಥರಾಯರ ಇಂಗ್ಲೀಷು ಶಿಕ್ಷಣವು ಸಾವಂತವಾಡಿಯ ಹೈಸ್ಕೂಲಿನಲ್ಲಾಯಿತು. ತಮ್ಮ ೧೪ನೇ ವಯಸ್ಸಿನಲ್ಲಿಯೇ ಇವರು ಡೆಹರಾಡೂನಿನಲ್ಲಿಯ ಪ್ರಿನ್ಸ್ ಆಫ್‌ವೇಲ್ಸ ಮಿಲಿಟರಿ ಶಾಲೆಗೆ ಸೇರಿಕೊಂಡರು. ಸಾವಂತವಾಡಿಯ ಆಗಿನ ಅಧಿಪತಿಗಳ ಪ್ರಯತ್ನದಿಂದ ಇವರಿಗೆ ಅಲ್ಲಿ ಶಿಕ್ಷಣಕ್ಕೆ ಆಸ್ಪದ ದೊರೆತದ್ದು. ಡೆಹರಾಡೂನದಲ್ಲೀಯ ಶಿಕ್ಷಣ ಮುಗಿಸಿ ಕೊಂಡು ೧೯೨೬ರಲ್ಲಿ ಜಗನ್ನಾಥರಾಯರು ಉಚ್ಚ ಶಿಕ್ಷಣಕ್ಕಾಗಿ ಇಂಗ್ಲೆಂಡಿ ನಲ್ಲಿಯ ಸ್ಟಂಡರ್ಸ್ಟ್ ಕಾಲೇಜಿಗೆ ತೆರಳಿದರು. ಅಲ್ಲಿ ಎಲ್ಲರಿಂದಲೂ 'ಭಲೆ' ಯೆನ್ನಿಸಿಕೊಂಡರು. ೧೯೨೮ರಲ್ಲಿ ಕ್ವೆಟಾದಲ್ಲಿ ಲಾಂಕೆಷಾಯರ್ ರೆಜಿಮೆಂಟಿ ನಲ್ಲಿ ೧ ವರ್ಷ ಕೆಲಸ ಮಾಡಿದರು. ಆಮೇಲೆ ಅಲ್ಲಿಯೇ ೫-೫ ರಾಯಲ್ ಮರಾಠಾ ಇನ್ಫಂಟ್ರಿಯ ಮೇಲೆ ನಿಯಮಿಸಲ್ಪಟ್ಟರು.

೧೯೩೦ರಲ್ಲಿ ಜಗನ್ನಾಥರಾಯರಿಗೆ ಕನ್ನೂರಿನಲ್ಲಿ ಲೆಪ್ಟನಂಟ ಎಡ್ಜ್ಯು ಟಂಟ್ ಹುದ್ದೆ ದೊರೆಯಿತು. ಅಲ್ಲಿರುವಾಗ ಕ್ರಿಸ್‌ಮಸ್ ರಜೆಯಲ್ಲಿ ಯುರೋಪಿಯನ್ ಅಧಿಕಾರಿಗಳಿಬ್ಬರು ಸಮುದ್ರ ಸ್ನಾನ ಮಾಡುತ್ತಿದ್ದಾಗ ಪ್ರಚಂಡ ಬಿರುಗಾಳಿಗೆ ಶಿಕ್ಕಿಬಿದ್ದರು. ಅವರನ್ನು ಬದುಕಿಸುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಜಗನ್ನಾಥರಾಯರು ಭೋರ್ಗರೆಯುವ ಕಡಲಿನ ಲ್ಲಿಯೇ ಧುಮುಕಿ ಅವರಿಬ್ಬರನ್ನೂ ಸುರಕ್ಷಿತವಾಗಿ ಮೇಲೆತ್ತಿಕೊಂಡು ಬಂದರು. ಈ ಪರಾಕ್ರಮದ ಬಗ್ಗೆ ಎಲ್ಲರೂ ಅವರನ್ನು ಕೊಂಡಾಡಿದರು.

ಸ್ವತಃ ಬಾದಶಹರು ಪದಕವನ್ನು ಕೊಟ್ಟು ಅವರನ್ನು ಗೌರವಿಸಿದರು. ೧೯೩೭ ರಲ್ಲಿ ಜಗನ್ನಾಥರಾಯರು ಕ್ಯಾಪ್ಟನ್‌ರಾದರು. ಬಾದಶಹರ ರಾಜ್ಯಾರೋಹಣದ ದರಬಾರಿಗೆ ಹೋಗುವ ಸಂಧಿಯೂ ಇವರಿಗೆ ದೊರೆಯಿತು.

ಇಂಗ್ಲೆಂಡಿನಿಂದ ವಾಪಸು ಬಂದ ಬಳಿಕ "ಜನರಲ್ ಸ್ಟಾಫ್"ದ ಶಿಕ್ಷಣಕ್ಕಾಗಿ ಇವರ ಆಯ್ಕೆಯಾಯಿತು. ಈ ಶಿಕ್ಷಣ ಮುಗಿಸಿಕೊಂಡು ಅವರು ಬರೇಲಿಯಲ್ಲಿ ಜನರಲ್ ಸ್ಟಾಫ್‌ನಲ್ಲಿ ಕೆಲಸವನ್ನೂ ಮಾಡಿದರು. ಆಮೇಲೆ ಸಿಂಗಾಪುರದ ಜನರಲ್ ಸ್ಟಾಫಿನಮೇಲೆ ಲೆಫ್ಟನಂಟ್ ಕರ್ನಲ್ ಸ್ಥಾನ ಇವರಿಗೆ ದೊರೆಯಿತು. ಸಿಂಗಾಪುರ ಪತನದನಂತರ ಶ್ರೀ ಜಗನ್ನಾಥ ರಾಯರು ಆಜಾದಹಿಂದ ಸೈನ್ಯಕ್ಕೆ ಸೇರಿಕೊಂಡರು. ಅಲ್ಲಿ ಇವರು "ಚೀಫ್ ಆಫ್‌ಸ್ಟಾಫ್" ಆಗಿದ್ದರು. ಆ ಸೈನ್ಯಕ್ಕಾಗಿ ಅವರು ಸಾವಿರಾರು ಹಿಂದೀ ಲಷ್ಕರೀ ಅಧಿಕಾರಿಗಳನ್ನು ತರಬೇತು ಮಾಡಿದರು. ೧೯೪೫ನೇ ಸಪ್ಟೆಂಬರ್ ಕೊನೆಯಲ್ಲಿ ಬ್ಯಾಂಕಾಕ್‌ದಲ್ಲಿ ಇವರು ಬಂಧಿಸಲ್ಪಟ್ಟರು. ಮೊನ್ನೆ ತಾನೆ ದಿಲ್ಲಿಯ ಕೆಂಪು ಕೋಟೆಗೆ ಇವರನ್ನು ತಂದಿರುವರಂತೆ.

ಜಗನ್ನಾಥರಾಯರು ಸರದಾರ ಮನೆತನದವರು. ಅವರ ಸಹೋದರರು ಬಡೋದೆ, ಸಾವಂತವಾಡಿಗಳಲ್ಲಿ ದೊಡ್ಡ ಹುದ್ದೆಯ ಮೇಲಿದ್ದಾರೆ. ಕಳೆದ ಮಹಾಯುದ್ಧದಲ್ಲಿ ಇವರ ಮನೆತನದವರು ತುಂಬಾ ಪರಾಕ್ರಮ ತೋರಿಸಿದ್ದಾರೆ. ಈ ಯುದ್ಧದಲ್ಲಿ ಜಗನ್ನಾಥರಾಯರು ತೋರಿಸಿದ ಶೌರ್ಯವೂ ಅಪ್ರತಿಮವಾದುದು. ಅವರ ಕೆಲವು ಆಪ್ತರು ಗ್ವಾಲ್ಹೇರದ ಲಷ್ಕರದಲ್ಲಿ ದೊಡ್ಡ ದೊಡ್ಡ ಹುದ್ದೆಯ ಮೇಲಿದ್ದಾರೆ ಗ್ವಾಲ್ಹೇರ ಅರಸು ಮನೆತನದ ದೂರದ ಸಂಬಂಧಿಕರಿವರು. ಶ್ರೀ ಜಗನ್ನಾಥರಾಯರ ಧರ್ಮಪತ್ನಿ ಸೌ. ಚಂದ್ರಿಕಾಬಾಯಿಯವರು ಕೊಲ್ಹಾಪುರ ಸಂಸ್ಥಾನದ ಸರದಾರ ಮನೆತನಸ್ಥರು. ಅವರ ತಂದೆ ಶ್ರೀ ಅಣ್ಣಾಸಾಹೇಬ ಶಿರಾಳೆಯವರು ಬಡೋದೆ ಮಹಾರಾಜರ "ಗಾರ್ಡಿಯನ್" ಆಗಿದ್ದರು. ಜಗನ್ನಾಥರಾಯರಿಗೆ ಮೂವರು ಹೆಣ್ಣುಮಕ್ಕಳಿದ್ದಾರೆ. ಹಿರಿಯ ಹುಡಿಗೆ ೧೧ ವರ್ಷದವಳು. ಸೌ॥ ಚಂದ್ರಿಕಾಬಾಯಿಯವರು ಮಕ್ಕಳೊಂದಿಗೆ ಸದ್ಯ ಬಡೋದೆಯಲ್ಲೇ ಇರುತ್ತಾರೆ.

ಜಗನ್ನಾಥರಾಯರ ಮೈಕಟ್ಟು ಶೂರ ಸೈನಿಕನಿಗೆ ಒಪ್ಪುವಂಥದ
ಆಗಿದೆ. ಸಾಹಸೀವೃತ್ತಿ. ಚುರುಕು ಬುದ್ಧಿ. ಸದಾ ಇರುವಿಕೆ. ಗರ್ವರಹಿ
ಸ್ವಭಾವ. ಯಾವಾಗಲೂ ಹಸನ್ಮುಖರು. ಇವರ ತೇಜಃಪೂರಿತ ಕಣ್ಣುಗಳ
ಒಳ್ಳೆ ಆಕರ್ಷಣೀಯವಾಗಿವೆ. ಮರಾಠಿ, ಇಂಗ್ಲೀಷು, ಹಿಂದೀ ಮೂರು
ಭಾಷೆಗಳ ಮೇಲೆ ಇವರ ಪ್ರಭುತ್ವವಿದೆ.

ಶ್ರೀ ಜಗನ್ನಾಥರಾಯರ ತಾಯಿ ಗಂಗಾಬಾಯಿ ೮೫ ವರ್ಷಗ
ಮುದುಕಿ ಇನ್ನೂ ಸಾವಂತವಾಡಿಯಲ್ಲಿ ಇದ್ದಾಳೆ. ಮಗನ ಭೆಟ್ಟಿಗಾಗಿ ಕಾ
ಕುಳಿತಿದ್ದಾಳೆ, ತಪಸ್ವಿನಿಯು ದೇವದರುಶನಕ್ಕಾಗಿ ಪ್ರತೀಕ್ಷೆಮಾಡು
ಕುಳಿತಂತೆ.

---

# ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಟ



ಕ್ಯಾ. ಶಹಾನವಾಜ, ಸೈಗಲ್, ಧಿಲಸ—ಈ ಸೇನಾಪತಿತ್ರಯರ ಅಲ್ಪ ಪರಿಚಯವನ್ನು ಈ ಮೊದಲಿನ ಪ್ರಕರಣಗಳಲ್ಲಿಯೇ ಕೊಟ್ಟಿದ್ದೇವೆ. ಇವರು ಮೊನ್ನೆ ತಾ. ೭-೧೨-೧೯೪೫ರಲ್ಲಿ ಕೆಂಪುಕೋಟೆಯ ನ್ಯಾಯಾಸ್ಥಾನದಲ್ಲಿ ಕೊಟ್ಟ ಹೇಳಿಕೆಯನ್ನು ಓದಿದರೆ "ಭಾರತದ ಸ್ವಾತಂತ್ರ್ಯದ ಬಗ್ಗೆ ಇವರಲ್ಲಿ ಕಳಕಳಿ ಎಷ್ಟಿದ್ದಿತೆಂಬುದು ಓದುಗರಿಗೆ ಸಹಜವಾಗಿ ಕಂಡುಬರಬಹುದು. ತಮ್ಮ ಹೋರಾಟ, ಭಾರತದ ಸ್ವಾತಂತ್ರ್ಯಕ್ಕಾಗಿಯೇ ಇತ್ತೆಂದು ಈ ಮೂವರೂ ಹೇಳಿದ್ದಾರೆ.

### ಕ್ಯಾ. ಶಹಾನವಾಜರ ಹೇಳಿಕೆ

"ಈ ದಂಡಿನ ನ್ಯಾಯಾಲಯ ಅಥವಾ ಯಾವದೇ ಕೋರ್ಟಿನಿಂದ ವಿಚಾರಿಸಲ್ಪಡುವಂಥ ಅಪರಾಧವನ್ನು ನಾನು ಮಾಡಿರುವದಿಲ್ಲ. ಯುದ್ಧದಲ್ಲಿ ಭಾಗವಹಿಸಿಲ್ಲವೆಂದೂ ನಾನು ಹೇಳುವದಿಲ್ಲ. ಆದರೆ ಸ್ವತಂತ್ರ ಹಿಂದುಸ್ಥಾನ ಸರಕಾರದ ಪ್ರಜೆಯೆಂದು ಮತ್ತು ಸುಸಂಸ್ಕೃತ ರಾಷ್ಟ್ರಗಳ ಯುದ್ಧನಿಯಮಗಳಂತೆ ನನ್ನ ಮಾತೃಭೂಮಿಯ ವಿಮೋಚನೆಗಾಗಿ ಹೋರಾಡಿದ್ದೇನೆ. ಬ್ರಿಟಿಶ್ ದಲಗಳು ನಮ್ಮನ್ನು ವಿರೋಧಿಸಿ ಸ್ವತಂತ್ರ ಹಿಂದುಸ್ಥಾನ ಸರಕಾರವು ಬ್ರಿಟಿಶರ ವಿರುದ್ಧ ಯುದ್ಧ ಹೂಡಿದೆಯೆಂಬುದನ್ನು ಒಪ್ಪಿಕೊಂಡಿರುತ್ತಾರೆ.

ಹಿಂದೀ ರಾಷ್ಟ್ರೀಯ ಸೈನ್ಯವನ್ನು ನಾನು ಸೇರಲು ನಿಶ್ಚಯಿಸಿದಾಗಲೇ ನನ್ನ ಪ್ರಾಣ, ನನ್ನ ಮನೆ, ನನ್ನ ಆಪ್ತೇಷ್ಟರು ಮತ್ತು ನನ್ನ ಮನೆಯವರ ರಾಜನಿಷ್ಠೆಯ ಪರಂಪರೆ ಮೊದಲಾದ ನನ್ನ ಸರ್ವಸ್ವವನ್ನೂ ತ್ಯಾಗಮಾಡಲು ನಿರ್ಧರಿಸಿದೆ. ನನ್ನ ಮಾರ್ಗದಲ್ಲಿ ಅಡ್ಡಬರುವ ನನ್ನ ಬಂಧುಗಳನ್ನು ಸಹ ತುಂಡರಿಸಲು ದೃಢನಿರ್ಧಾರ ಮಾಡಿದೆ. ೧೯೪೫ರಲ್ಲಿ ಇಂಥ ಪ್ರಸಂಗವು ಸಹ ಬಂದಿತು. ಚಿನ್ ಪರ್ವತದಡಿಯಲ್ಲಿ ನನ್ನ ಕಕ್ಕನ ಮಗನೊಡನೆ ನಾನು ಎರಡು ತಿಂಗಳ ಕಾಲ ಯುದ್ಧ ಮಾಡಿರುವೆನು.

ರಾಜಸಿಗೆ ನಿಷ್ಠನಾಗಿರಬೇಕೋ ಅಥವಾ ರಾಷ್ಟ್ರಕ್ಕೋ ಎಂಬ ಪ್ರಶ್ನೆ ನನ್ನ ಮುಂದಿತ್ತು. ರಾಷ್ಟ್ರಕ್ಕೇ ವಿಧೇಯನಾಗಿರತಕ್ಕದ್ದೆಂದು ನಿರ್ಣಯಿಸಿ ನೇತಾಜಿ ಸುಭಾಸಚಂದ್ರ ಬೋಸರಿಗೆ ವಚನಕೊಟ್ಟೆನು.

ಮಹಮ್ಮದ ಹುಸೇನನ ಕೊಲೆಗೆ ನಾನು ಕಾರಣನಲ್ಲ ಅಥವಾ ಸಹಾಯವನ್ನೂ ಮಾಡಿರುವದಿಲ್ಲ. ಸರಕಾರಿ ಪರ ಸಾಕ್ಷೀದಾರರು ಹೇಳಿದ ಮಾತುಗಳು ಸತ್ಯವಿದ್ದರೂ ನನ್ನ ಮೇಲೆ ಆರೋಪ ಬರಲಾರದು. ಯಾಕೆಂದರೆ ಮುಹಮ್ಮದ ಹುಸೇನನು ತಾನಾಗಿಯೇ ರಾಷ್ಟ್ರೀಯ ಸೈನ್ಯವನ್ನು ಸೇರಿದ್ದ. ಆದರೆ ಆಯುತ ಪ್ರಸಂಗದಲ್ಲಿ ದ್ರೋಹ ಬಗೆದು ಓಡಿಹೋಗಲು ಯತ್ನಿಸಿದ. ಅವನ ಕಾರ್ಯವು ಯಶಸ್ವಿಯಾಗಿದ್ದರೆ ನನ್ನ ದಲದ ಚಲನವಲನಗಳು ಶತ್ರುವಿಗೆ ಗೊತ್ತಾಗಿ ನಾವು ಗಂಡಾಂತರದಲ್ಲಿ ಬೀಳುತ್ತಿದ್ದೆವು. ಹಿಂದೀ ರಾಷ್ಟ್ರೀಯ ಸೈನ್ಯದ ಕಾಯಿದೆಯಂತೆ ಮರಣದ ದಂಡನೆಗೆ ಗುರಿಯಾಗುವಂಥ ಹೀನ ತರದ ಅಪರಾಧವನ್ನು ಅವನು ಮಾಡಿದನು. ಆದಾಗ್ಯೂ ನಾನು ಅವನಿಗೆ ಮರಣ ದಂಡನೆ ವಿಧಿಸಿದೆನೆಂಬುದೂ ಅದರನ್ವಯ ಅವನನ್ನು ಗುಂಡಿಕ್ಕಿ ಕೊಲ್ಲಲಾಯಿತೆಂಬುದೂ ಪೂರ್ಣ ಸುಳ್ಳು. ನನ್ನ ಮುಂದೆ ತಂದು ನಿಲ್ಲಿಸಿದಾಗ ನಾನು ಅವನಿಗೆ ಸಿಟ್ಟು ಮಾಡಿ, ಮರಣ ದಂಡನೆ ಮಾಡುವಂಥ ಅಪರಾಧ ನೀನು ಮಾಡಿರುವಿ ಎಂದು ಮಾತ್ರ ಹೇಳಿ, ಆರೋಪಿಯನ್ನು ಕೆಲದಿನ ಬಿಟ್ಟು ನನ್ನ ಮುಂದೆಯಾಗಲೀ ಅಥವಾ ಈ ಸಂಬಂಧದಲ್ಲಿ ಅಧಿಕಾರಹೊಂದಿದ ರೆಜಿಮೆಂಟದ ಕಮಾಂಡರನ ಮುಂದೆಯಾಗಲೀ ತಂದು ನಿಲ್ಲಿಸಲು ಹೇಳಿ ಕಳಿಸಿಕೊಟ್ಟೆ, ಆಮೇಲೆ ಆ ಖಟ್ಲೆ ನನ್ನ ಮುಂದೆ ಬರಲೇ ಇಲ್ಲ. ಯಾಕೆಂದರೆ ಅಂಥ ಪ್ರಸಂಗವೂ ಇದ್ದಿಲ್ಲ.

ಸುಭಾಸಚಂದ್ರ ಬೋಸರನ್ನು ಹಿಂದುಸ್ತಾನದಲ್ಲಿ ನಾನು ಎಂದೂ ನೋಡಿದ್ದಿಲ್ಲ ಮತ್ತು ಅವರ ಚಟುವಟಿಕೆಗಳ ಅರಿವು ನನಗಿದ್ದಿಲ್ಲ. ಆದರೆ ಮಲಯಾದಲ್ಲಿ ನಾನು ಅವರ ಅನೇಕ ಭಾಷಣಗಳನ್ನು ಕೇಳಿದೆ. ಅವುಗಳ ಪರಿಣಾಮ ನನ್ನ ಮೇಲೆ ಅತೀವವಾಯಿತು. ಪ್ರಭಾವಯುತ ಅವರ ವ್ಯಕ್ತಿತ್ವ ಹಾಗೂ ಭಾಷಣಗಳಿಂದ ನನ್ನ ಮೇಲೆ ಮಾಟಮಾಡಿದಂಥ ಪರಿಣಾಮವಾಯಿತೆಂದರೆ ತಪ್ಪಾಗಲಿಕ್ಕಿಲ್ಲ. ಹಿಂದುಸ್ತಾನದ ನಿಜ ಚಿತ್ರವನ್ನು ಅವರು ನಮ್ಮ ಕಣ್ಣಮುಂದೆ ಇಟ್ಟರು. ನನಗೆ ಹಿಂದುಸ್ತಾನದ ಅರಿವಾದದ್ದು ಆಗಲೇ.

ಅವರ ಸ್ವಾರ್ಥತ್ಯಾಗವು ನನ್ನ ಮನಸಿನ ಮೇಲೆ ಬಹಳ ಪರಿಣಾಮ ಬೀರಿತು. ಅವರ ಉಜ್ವಲ ರಾಷ್ಟ್ರಭಕ್ತಿ, ಸರಳತನ ಮತ್ತು ಜಪಾನಿಗಳಿಗೂ ತಲೆಬಾಗ ದಂಥ ಧೀರೋದಾತ್ತತನ ಇವು ನನ್ನನ್ನು ಮೋಹಗೊಳಿಸಿದವು. ನಾನು ಜೇಡ ವೆಂದರೂ ಜಪಾನಿಗಳು ಹಿಂದುಸ್ತಾನದ ಮೇಲೆ ದಾಳಿಮಾಡುವ ಹವಣಿಕೆ ಹಾಕಿದ್ದರೆಂದೂ ಅವರನ್ನು ಎದುರಿಸುವಷ್ಟು ಶಕ್ತಿ ಬ್ರಿಟಿಶರಲ್ಲಿದ್ದಿಲ್ಲವೆಂದೂ ನಾನು ಮನಗಂಡಿದ್ದರಿಂದ ಮತ್ತು ಜಪಾನಿ ದಾಳಿಯಾದ ನಂತರ ಮಲಯಾ ದಲ್ಲುಂಟಾದ ಹೃದಯದ್ರಾವಕ ಪರಿಸ್ಥಿತಿಯನ್ನು ನಾನು ಕಣ್ಣಾರೆ ನೋಡಿದ್ದ ರಿಂದ, ಮಲಯಾದಲ್ಲಿ ಯುದ್ಧ ಕೈದಿಯಾಗಿ ಬೀಳುವದಕ್ಕಿಂತ ಪಿಸ್ತೂಲ ಧಾರಿಯಾಗಿ ಮುನ್ನಡೆದರೆ ನನ್ನ ದೇಶಬಾಂಧವರ ರಕ್ಷಣೆಗೆ ಸಹಾಯವಾಗ ಬಹುದೆಂದು ಎನಿಸಿತು.

ಹಿಂದೀ ರಾಷ್ಟ್ರೀಯ ಸೈನ್ಯದಲ್ಲಿ ಸೇರಲು ಯಾರಿಗೂ ನಾವು ಒತ್ತಾಯ ಮಾಡಿಲ್ಲವೆಂಬದನ್ನು ಸರಕಾರಿಪರ ಸಾಕ್ಷೀದಾರರೇ ಒಪ್ಪಿದ್ದಾರೆ. ರಾಷ್ಟ್ರೀಯ ಸೈನ್ಯ ಸೇರುವವರು ಹಸಿವೆ, ನೀರಡಿಕೆ ಮೊದಲಾದ ಕಷ್ಟ ಪರಂಪರೆಯನ್ನು ಎದುರಿಸಬೇಕಾಗುವದೆಂದು ಒತ್ತಿ ಒತ್ತಿ ಹೇಳಿರುವೆ. ಆದಾಗ್ಯೂ ಸಕಲರೂ ಒಳ್ಳೇ ಉತ್ಸಾಹದಿಂದ ಮುಂದೆ ಬರುತ್ತಿರುವದನ್ನು ಮತ್ತು ತಮ್ಮ ಸರ್ವಸ್ವ ವನ್ನು ಆಜಾದ ಹಿಂದ ಸರಕಾರಕ್ಕೆ ಭಕ್ತಿಪೂರ್ವಕವಾಗಿ ಅರ್ಪಿಸುತ್ತಿರುವ ದೃಶ್ಯವನ್ನು ನಾನು ಕಣ್ಮುಟ್ಟ ಕಂಡಿರುವೆನು. ಹತಬಲರಾದ ಲಕ್ಷಾಂತರ ಹಿಂದೀಯರ ಪ್ರಾಣ ರಕ್ಷಣೆಗೆ ಮುಂದೆ ಬರಬೇಕೆಂದು ನೇತಾಜಿಯು ಕೇಳಿ ಕೊಂಡಾಗ, ನಿರಾಕರಿಸುವ ಧೈರ್ಯ ಅದಾವ ರಾಷ್ಟ್ರೀಯನಿಗೆ ಬರುವದು? ನೇತಾಜಿ ನಿಜವಾಗಿಯೂ ನೇತಾಜಿ ಇದ್ದದರಿಂದ ಅವರನ್ನು ಹಿಂಬಾಲಿ ಸಲು ನಾನು ನಿರ್ಧರಿಸಿದೆ. ಜೀವನದಲ್ಲಿ ಇದು ಅತ್ಯಂತ ಮಹತ್ವದ ನಿರ್ಣಯ ವಾಗಿದೆ. ನನ್ನ ಅಭಿಪ್ರಾಯಕ್ಕೆ ನನ್ನ ಬಂಧು ಬಳಗದವರು ಒಪ್ಪುವದಿಲ್ಲ ವಾದ್ದರಿಂದ ಅವರೊಡನೆಯೂ ಹೋರಾಡಲು ನಿರ್ಧರಿಸಿದೆನು.

ಬ್ರಿಟಿಶರ ಭೇದನೀತಿಯನ್ನು ನಾನು ಸ್ವತಃ ಅನುಭವಿಸಿದ್ದೇನೆ. ಬ್ರಿಟಿ ಶರು ಹಿಂದುಸ್ತಾನದ ಸಂಪತ್ತನ್ನು ನಿಷ್ಕರುಣವಾಗಿ ಹೀರುತ್ತಿರುವದರಿಂದ ಮತ್ತು ಅವರಿಗೆ ಅಡ್ಡ ಬರದಂತೆ ಜನತೆಯನ್ನು ಬೇಕಾಗಿಯೇ ಅಜ್ಞಾನ ಕೂಪದಲ್ಲಿಟ್ಟಿರುವದರಿಂದ, ಅವರ ಬಗ್ಗೆ, ಅನ್ಯಾಯದಿಂದ ತುಂಬಿದ ಅವರ

ಆಪಳಿತೆಯ ಬಗ್ಗೆ ನನ್ನಲ್ಲಿ ತಿರಸ್ಕಾರ ಹುಟ್ಟಿತು. ಈ ಅನ್ಯಾಯವನ್ನು ತೊಡೆದು ಹಾಕಲು ಸರ್ವ ತ್ಯಾಗ ಮಾಡಲು ಸಂಕಲ್ಪಿಸಿದೆ.

ಹಿಂದೀ ರಾಷ್ಟ್ರೀಯ ಸೈನ್ಯವು ಅನುಭವಿಸಿದಂಥ ಸಹನಾತೀತ ಕಷ್ಟಗಳನ್ನು ಸಂಬಳದ ಯಾವ ಸೈನ್ಯವೂ ಸಹಿಸಲಾರದು. ಭಾರತಮಾತೆಯ ಬಂಧವಿಮೋಚನೆಗಾಗಿಯೇ ನಾವು ಅದೆಲ್ಲವನ್ನೂ ಸಹಿಸಿಕೊಂಡೆವು.

**ಕ್ಯಾ. ಸೈಗಲರ ಹೇಳಿಕೆ**

"೧೯೪೨ ಫೆಬ್ರುವರಿ ೧೭ನೇ ದಿನ ಬ್ರಿಟಿಶ್ ಪ್ರತಿನಿಧಿಯಾದ ಲೆ. ಕ. ಹಂಟರು ಫೆರಾರ ಪಾರ್ಕದಲ್ಲಿ ಭಾಷಣಮಾಡಿ ನಮ್ಮನ್ನು ಕುರಿಯ ಹಿಂಡುಗಳಂತೆ ಜಪಾನಿಗಳಿಗೆ ಒಪ್ಪಿಸಿದರು. ಇದರಿಂದ ನಮಗೆ ವಜ್ರಾಘಾತವಾದಂತಾಯಿತು. ಹಿಂದೀ ಸೈನ್ಯವು ಅನೇಕ ಕಷ್ಟನಷ್ಟಗಳನ್ನು ಎದುರಿಸಿ ಅತ್ಯಂತ ಸಾಹಸದಿಂದ ಹೋರಾಡಿದ್ದಿತು. ಆದರೆ ಕೊನೆಗೆ ಅದನ್ನು ನಡು ನೀರಿನಲ್ಲಿ ಕೈಬಿಟ್ಟರು. ಬ್ರಿಟಿಶ್ ರಾಜರೊಡನಿದ್ದ ನಮ್ಮ ಸಂಬಂಧವನ್ನು ಬ್ರಿಟಿಶರೇ ಕಡಿದುಕೊಂಡು ತಮ್ಮ ಮೇಲಿದ್ದ ಹೊಣೆಯನ್ನು ಇಳಿಸಿಕೊಂಡರು. ಅನಂತರ ನಮ್ಮ ದೈವವನ್ನು ನಾವೇ ಕಂಡುಕೊಳ್ಳಲು ಜಪಾನಿಗಳು ನಮ್ಮನ್ನು ಕ್ಯಾ. ಮೋಹನಸಿಂಗರಿಗೆ ಒಪ್ಪಿಸಿದರು. ಬ್ರಿಟಿಶ್ ಸರಕಾರವು ನಮ್ಮನ್ನು ರಕ್ಷಿಸುವದನ್ನು ಬಿಟ್ಟು ಓಡಿಹೋಗಿದ್ದರಿಂದ ನಮ್ಮಿಂದ ರಾಜನಿಷ್ಠೆಯನ್ನು ಅಪೇಕ್ಷಿಸುವದೆಂತು?

೧೯೪೨ ಅಗಸ್ಟದಲ್ಲಿ ಎ. ಆಯ್. ಸಿ. ಸಿ. ಸಭೆಯು ಚಲೇಜಾವ್ ಗೊತ್ತುವಳಿ ಪಾಸುಮಾಡಿತು. ದಿಲ್ಲಿ ಮತ್ತು ಲಂಡನ ರೇಡಿಯೋಗಳು ಅವರ ಸುದ್ದಿಗಳ ಮೇಲೆ ಮುಸುಕನ್ನೆಳೆದಿದ್ದವು. ಆದಾಗ್ಯೂ ಹಿಂದುಸ್ತಾನದಲ್ಲಿದ್ದ ಕೆಲವು ಗುಪ್ತ ಆಕಾಶವಾಣಿಗಳು ಮತ್ತು ಅಚ್ಚು ರಾಷ್ಟ್ರಗಳ ಆಕಾಶವಾಣಿ ಕೇಂದ್ರಗಳು ಹಿಂದುಸ್ತಾನದಲ್ಲಿ ನಡೆಯುತ್ತಿರುವ ಘಟನೆಗಳನ್ನು ಹಾಗೂ ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಶರು ಕೈಕೊಂಡ ದಬ್ಬಾಳಿಕೆಯ ವಿವರಗಳನ್ನು ತಿಳಿಸುತ್ತಿದ್ದವು. ಇವುಗಳನ್ನು ಕೇಳಿದನಂತರ, ೧೮೫೭ರ ಕ್ರಾಂತಿಯಾದ ಮೇಲೆ ಹಿಂದುಸ್ತಾನದಲ್ಲಿ ನಡೆದ ಭಯಾನಕ ಆಡಳಿತೆ ಈಗಲೂ ತಲೆಯೆತ್ತಿದೆಯೆಂದು ನನಗನಿಸಿತು. ಈ ಸುದ್ದಿಗಳನ್ನು ನಂಬದಿರಲು ಕಾರಣಗಳಿದ್ದಿಲ್ಲ. ನಾವು ನಮ್ಮ ಬೆನ್ನ ಹಿಂದೆ ಬಿಟ್ಟು ಬಂದ

ನಮ್ಮ ಬಳಗದವರ ಬಗ್ಗೆ ಚಿಂತೆಯುಂಟಾಯಿತು. ನಮ್ಮನ್ನು ನಿರಂತರ ದಾಸ್ಯದಲ್ಲಿರಿಸಲು ಬ್ರಿಟಿಶರು ಪ್ರಯತ್ನಿಸುತ್ತಿರುವರೆಂದು ತಿಳಿದು ದ್ವೇಷ ಹುಟ್ಟಿತು. ಇತ್ತ ಬ್ರಿಟಿಶರು ಹಿಂದುಸ್ತಾನದ ರಕ್ಷಣೆಗೆ ಮಾಡಿದ ಸಿದ್ಧತೆಯೂ ಸಾಕಷ್ಟಿದ್ದಿಲ್ಲ. ಆದುದರಿಂದ ನಾವು ದೀರ್ಘ ವಿಚಾರವಿನಿಮಯ ಮಾಡಿ ನಮ್ಮದೇ ಒಂದು ಸೈನ್ಯ ಕಟ್ಟಿಕೊಂಡು ಜಪಾನಿಗಳೊಡನೆ ಹಿಂದುಸ್ತಾನದಲ್ಲಿ ನುಗ್ಗಿ ಮಾತೃಭೂಮಿಯ ವಿಮೋಚನೆ ಮಾಡಬೇಕು ಮತ್ತು ಜಪಾನಿಗಳು ಅಡ್ಡ ಬಂದು ತಾವೇ ಅರಸರಾಗಲು ಹವಣಿಸಿದರೆ ಅವರನ್ನೂ ಎದುರಿಸುವ ಸಿದ್ಧತೆಯಲ್ಲಿರಬೇಕು ಎಂದು ನಿರ್ಣಯಿಸಿದೆವು.

ಸ್ಥಾನಬದ್ಧತೆಯಲ್ಲಿ ನಮ್ಮನ್ನು ಜಪಾನಿಗಳು ಕೆಟ್ಟರೀತಿಯಿಂದ ನಡಿಸಿಕೊಳ್ಳುವರೆಂದು ಹೆದರಿ ನಾನು ಹಿಂದೀ ರಾಷ್ಟ್ರೀಯ ಸೈನ್ಯವನ್ನು ಸೇರಲಿಲ್ಲ. ಅಥವಾ ಅದರಲ್ಲಿ ನನಗೆ ಹಣದಾಸೆಯೂ ಇದ್ದಿಲ್ಲ. ೧೯೪೨ ಸಪ್ಟಂಬರದಲ್ಲಿ ಹಿಂದೀ ರಾಷ್ಟ್ರೀಯ ಸೈನ್ಯದಲ್ಲಿ ನಾನು ಕ್ಯಾಪ್ಟನನಿದ್ದಾಗ ತಿಂಗಳಿಗೆ ನನಗೆ ಕೇವಲ ೮೦ ಡಾಲರುಗಳು ಸಿಗುತ್ತಿದ್ದವು. ಅದೇ ನಾನು ಜಪಾನಿಗಳ ಸ್ಥಾನಬದ್ಧನಾಗಿ ಉಳಿದಿದ್ದರೆ ೧೨೦ ಡಾಲರುಗಳು ದೊರೆಯುತ್ತಿದ್ದವು. ರಾಷ್ಟ್ರಭಕ್ತಿಯಿಂದಲೇ ನಾನು ಹಿಂದೀ ರಾಷ್ಟ್ರೀಯ ಸೈನ್ಯವನ್ನು ಸೇರಿದೆನು.

ವಾಸ್ತವಿಕವಾಗಿ ನೋಡಿದರೆ ನನ್ನನ್ನು ಯುದ್ಧಬಂದಿಯೆಂದು ಗೌರವದಿಂದ ನಡೆಸಿಕೊಳ್ಳತಕ್ಕದ್ದು. ಯಾಕೆಂದರೆ ೧೯೪೫ ಎಪ್ರಿಲ ೧೮ಕ್ಕೆ ಪೋಪಾ ಹತ್ತಿರ ಶರಣು ಬರುವ ಮೊದಲು ಬ್ರಿಟಿಶ್ ದಲಪತಿಗೆ ಕಳಿಸಿದ ಪತ್ರದಲ್ಲಿ ಇದನ್ನು ಕಾಣಿಸಿರುವೆನು. (ಈ ಪತ್ರ ಮುಟ್ಟಿದೆಯೆಂದು ಒಪ್ಪಿಕೊಂಡರೂ ಅದೀಗ ಕಳೆದಿದೆಯೆಂದು ಹೇಳಲಾಗುತ್ತದೆ) "ಯುದ್ಧ ಬಂದಿಗಳೆಂದು ಮಾತ್ರ ನಾವು ಶರಣು ಬರಲು ಸಿದ್ಧರಿದ್ದೇವೆ" ಎಂದು ಅದರಲ್ಲಿ ಸ್ಪಷ್ಟ ಹೇಳಿದ್ದೆವು. ಅವರು ಒಪ್ಪಿದ್ದರಿಂದ ನಾವು ಶರಣು ಬಂದೆವು. ಇಲ್ಲದಿದ್ದರೆ ನಾವು ನಮ್ಮ ದೇಹದಲ್ಲಿಯ ಕೊನೆಯ ರಕ್ತದ ಹನಿ ಧರೆಗೆ ಬೀಳುವವರೆಗೂ ಹೋರಾಡುತ್ತಿದ್ದೆವು.

ಕೊಲೆಗೆ ಸಹಾಯ ಮಾಡಿರುವದಾಗಿ ನನ್ನ ಮೇಲೆ ಹೊರಿಸಿದ ಆರೋಪವಂತೂ ನಿರಾಧಾರವಾದುದು. ನಾನು ನಾಲ್ವರು ಸೈನಿಕರನ್ನು ಅಪರಾಧಕ್ಕಾಗಿ ವಿಚಾರಿಸಿದ್ದು ನಿಜ. ಅವರ ಅಪರಾಧವು ಸಿದ್ಧವಾದುದ-

ರಿಂದ ಅವರಿಗೆ ಮರಣದಂಡನೆ ವಿಧಿಸಲಾಯಿತು. ಆದರೆ ಅವರು ಪಶ್ಚಾತ್ತಾಪ ವ್ಯಕ್ತಮಾಡಿ ಕ್ಷಮೆ ಕೇಳಿದ್ದರಿಂದ ಶಿಕ್ಷೆಯನ್ನು ಕಾರ್ಯಕಾರಿ ಮಾಡಲಿಲ್ಲ. ತಪ್ಪಿಸಿಕೊಂಡು ಓಡಿಹೋಗಲು ಪ್ರಯತ್ನಿಸುವವರಲ್ಲಿ ಹೆದರಿಕೆ ಹುಟ್ಟಿಸಲು ಮಾತ್ರ ಈ ಮರಣದಂಡನೆಯನ್ನು ಪ್ರಚಾರಕ್ಕಾಗಿ ಉಪಯೋಗ ಮಾಡಿಕೊಳ್ಳಲಾಯಿತು. ಇದು ನಿಜಸ್ಥಿತಿ. ಒಂದು ವೇಳೆ ಈ ಶಿಕ್ಷೆಗಳನ್ನು ಕಾರ್ಯಕಾರಿ ಮಾಡಿದ್ದರೂ ನನ್ನ ಮೇಲೆ ಕೊಲೆಗೆ ಸಹಾಯ ಮಾಡಿದ ಆರೋಪ ಉಂಟಾಗಲಾರದು. ಆ ನಾಲ್ವರು ಸ್ವಯಂಪ್ರೇರಿತರಾಗಿ ಹಿಂದೀ ರಾಷ್ಟ್ರೀಯ ಸೈನ್ಯ ಸೇರಿದ್ದರು. ಆದರೂ ನಡುವೆ ನಾಚಿಕೆಗೇಡಿಗಳಾಗಿ ಓಡಿಹೋಗಲು ಪ್ರಯತ್ನಿಸಿದರು. ಇಂಥ ಅಪರಾಧಕ್ಕೆ ಸಮಸ್ತ ರಾಷ್ಟ್ರಗಳ ಮಿಲಿಟರಿ ಕಾಯದೆಯಲ್ಲಿ ಮರಣದಂಡನೆಯನ್ನು ಹೇಳಲಾಗಿದೆ.

ಹಿಂದೀ ರಾಷ್ಟ್ರೀಯ ಸೈನ್ಯದ ಉದ್ದೇಶವು ಸಾಧಿಸದಿದ್ದರೂ ಬ್ರಹ್ಮದೇಶ, ಮಲಯಾ ಮೊದಲಾದ ದೇಶಗಳಲ್ಲಿಯ ಹಿಂದೀಯರ ಪ್ರಾಣ ಮತ್ತು ಆಸ್ತಿಯ ರಕ್ಷಣೆ ಮಾಡಿದ ಸಮಾಧಾನ ನಮಗಾಗಿದೆ. ಈ ವಿಚಾರಣೆ ಸುರುವಾದಂದಿನಿಂದ ರಂಗೂನ ಕ್ರಿಶ್ಚಿಯನ್ ಸಂಘ ಮತ್ತು ಬರ್ಮಾ ಹಿಂದೀ ಸಂಘದ ಅಧ್ಯಕ್ಷರು ಕಳಿಸಿದ ತಂತಿಗಳೇ ಇದಕ್ಕೆ ನಿದರ್ಶನವಾಗಿರುವವು.

## ೬. ಧಿಲನರ ಹೇಳಿಕೆ

“ ನಾನು ಶಿಕ್ಷಣ ಪಡೆದ ಡೆಹರಾಡೂನ ಮಿಲಿಟರಿ ಕಾಲೇಜದ ಚೆಟವುಡ್ಡ ಸಭಾ ಭವನದಲ್ಲಿ ಕೆಳಗಿನ ಶಬ್ದಗಳನ್ನು ಕೆತ್ತಲಾಗಿದೆ.

‘ ನಿಮ್ಮ ರಾಷ್ಟ್ರದ ಗೌರವ, ಹಿತ ರಕ್ಷಣೆ ಮತ್ತು ಸುರಕ್ಷಿತತೆ ಇವುಗಳಿಗೆ ಯಾವಾಗಲೂ ಪ್ರಥಮ ಸ್ಥಾನ. ಆ ನಂತರ ನಿಮ್ಮ ಕೈಕೆಳಗಿರುವ ಸೈನಿಕರ ಸುಖ ಮತ್ತು ಸುರಕ್ಷಿತತೆಗಳು ಯಾವಾಗಲೂ ಕೊನೆಯದು.’

ನನ್ನ ಮುಂದೆ ಇದೇ ಉಚ್ಚ ಧ್ಯೇಯವನ್ನಿಟ್ಟುಕೊಂಡು ನನ್ನ ದೇಶದ ಸೇವೆ ಮಾಡಿರುವೆನು.

ಮಲಯಾದಲ್ಲಿ ಬ್ರಿಟಿಶರ ಸಿದ್ಧತೆ ಎಳ್ಳಷ್ಟೂ ಇದ್ದಿಲ್ಲ. ಜಪಾನಿಗಳ ದಾಳಿಯಾದನಂತರ ಅಲ್ಲಿಯ ಜನರಿಗೆ ಅತೀವ ಕಷ್ಟ ಪ್ರಾಪ್ತವಾಯಿತು. ಇವರು ಹಿಂದುಸ್ತಾನದ ಮೇಲೆ ದಾಳಿ ಮಾಡಿದರೆ ನಮ್ಮ ಜನರ ಪರಿಸ್ಥಿತಿ ಏನಾದೀತೆಂದು ನೆನೆದು ನಡುಕ ಹುಟ್ಟಿತು. ಬ್ರಿಟಿಶರು ೧೫೦ ವರ್ಷಗಳ

ಆಳಿಕೆಯಲ್ಲಿ ನಮ್ಮ ದುರ್ದೈವಿ ದೇಶಕ್ಕೆ ಬಗೆದ ಅನ್ಯಾಯದ ಅರಿವು ನನಗೆ ಆಗ ಆಯಿತು. ಬ್ರಿಟಿಶರು ನಮ್ಮ ಸಂಪತ್ತನ್ನಷ್ಟೇ ಹೀರಿರುವದಿಲ್ಲ, ನಮ್ಮನ್ನು ದಾಸ್ಯದಲ್ಲಿರಿಸಿ, ತಮ್ಮ ಸಾಮ್ರಾಜ್ಯ ಪಿಪಾಸೆಯನ್ನು ತೃಪ್ತಿಗೊಳಿಸಿಕೊಳ್ಳಲು ಹಿಂದೀ ವೀರರ ರಕ್ತ ಹರಿಸಿದ್ದಾರೆ. ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡಿರುತ್ತಾರೆ. ಆದುದರಿಂದ ಕ್ಯಾ. ಮೋಹನಸಿಂಗರು ರಚಿಸಲಿದ್ದ ರಾಷ್ಟ್ರೀಯ ಸೈನ್ಯದಲ್ಲಿ ನನಗೆ ಆಶೆ ಹುಟ್ಟಿತು. ಈ ಪ್ರಸಂಗದಲ್ಲಿ ಬಲಿಷ್ಠ ಮತ್ತು ಸುಸಜ್ಜಿತವಾದ ಒಂದು ಸೈನ್ಯವನ್ನು ಸಂಘಟಿಸಿದರೆ ಹಿಂದುಸ್ತಾನವನ್ನು ಪರಕೀಯರ ದಾಸ್ಯದಿಂದ ಮುಕ್ತಗೊಳಿಸುವದಲ್ಲದೆ, ಜಪಾನಿಗಳು ವಚನ ಭಂಗ ಮಾಡಿ ನಮ್ಮ ತಲೆಯ ಮೇಲೆ ಮೆಣಸು ಅರೆಯಲು ಬಂದರೆ ಅವರನ್ನೂ ಎದುರಿಸಬಹುದು ಎಂದೆನಿಸಿತು. ಭಾರತಮಾತೆ ನನ್ನನ್ನು ಕೂಗಿ ಕರೆಯುತ್ತಿರುವಂತೆ ಭಾಸವಾಯಿತು. ನಾನು ಅದಕ್ಕೆ ಓಗೊಟ್ಟು ಕ್ಯಾ. ಮೋಹನಸಿಂಗರ ಜೊತೆಯಲ್ಲಿ ಧುಮುಕಿದೆನು. ಆ ನಂತರ ಸುಭಾಸಚಂದ್ರ ಬೋಸರ ನೇತೃತ್ವದಲ್ಲಿಯೂ ಹೋರಾಡಲು ನಿರ್ಧರಿಸಿದೆನು.

ಹಿಂದೀ ರಾಷ್ಟ್ರೀಯ ಸೈನ್ಯದಲ್ಲಿ ಸೇರಲು ನಾವು ಯಾರಿಗೂ ಒತ್ತಾಯ ಮಾಡಿರುವದಿಲ್ಲ. ಸರಕಾರಿ ಸಾಕ್ಷಿದಾರರು ಅಧಿಕಾರಿಗಳ ಪ್ರೇಮ ಸಂಪಾದನೆಗಾಗಿ ಸುಳ್ಳು ಸಂಗತಿಗಳನ್ನು ಹೇಳಿರುವರು. ಅಲ್ಲದೆ ನಾವು ಒತ್ತಾಯ ಮಾಡುವ ಪ್ರಸಂಗವೇ ಬರುತ್ತಿದ್ದಿಲ್ಲ. ಸೈನ್ಯದಲ್ಲಿ ಸೇರಲು ಮುಂದೆ ಬಂದ ಸ್ವಯಂಸೇವಕರ ಸಂಖ್ಯೆ ಹೆಚ್ಚಿಗಿದ್ದದರಿಂದ ಮತ್ತು ನಮ್ಮಲ್ಲಿ ಸಾಕಷ್ಟು ಶಸ್ತ್ರ ಸಾಮುಗ್ರಿಗಳಿಲ್ಲದ್ದರಿಂದ ಅನೇಕರನ್ನು ನಿರುತ್ಸಾಹಗೊಳಿಸಬೇಕಾಗುತ್ತಿತ್ತು. ದೇಶಪ್ರೇಮವಿದ್ದವರೇ ಸೇರತಕ್ಕದ್ದೆಂದು ನನ್ನ ಎಲ್ಲ ಭಾಷಣಗಳಲ್ಲಿ ಹೇಳುತ್ತ ಬಂದಿರುವೆನು. ಸೇರಿದ ಮೇಲೂ ಯುದ್ಧಕ್ಕೆ ಹೊರಡಲು ಹೆದರಿದವರನ್ನು ಹಿಂದೆ ಬಿಡಲಾಗಿದೆ. ನನ್ನ ದಲವು ಮಿಂಗ್ಯಾನಕ್ಕೆ ಹೊರಡುವ ಮೊದಲು ಇಂಥ ೨೦೦ ಜನರನ್ನು ರಂಗೂನಕ್ಕೆ ಮರಳಿ ಕಳಿಸಿ ಕೊಡಲಾಯಿತು. ಜನರ ಮೇಲೆ ಒತ್ತಾಯ ಮಾಡಲು ನಾವು ಶಿಬಿರಗಳನ್ನೇರ್ಪಡಿಸಿದ್ದೆವೆಂಬದು ಶುದ್ಧ ಸುಳ್ಳು. ಗುಣಹೀನರನ್ನಿಡಲು ಒಂದು ಸ್ಥಾನಬದ್ಧ ಶಿಬಿರವನ್ನೇರ್ಪಡಿಸಿದ್ದೆವು. ಅದರಲ್ಲಿ ಹಾಕಿದವರನ್ನು ನಮ್ಮ ಸೈನ್ಯದಲ್ಲಿ, ಅವರು ಬರುತ್ತೇವೆಂದರೂ ಸೇರಿಸಿಕೊಳ್ಳುತ್ತಿದ್ದಿಲ್ಲ. ಅನೇಕ ಸಲ ನನಗೆ ೨೦-೩೦ ತಾಸುಗಳ

ವರೆಗೆ ನೀರು ಸಿಗುತ್ತಿದ್ದಿಲ್ಲ. ನಾನು ಒಂದು ಬ್ರಿಗೇಡದ ದಲಪತಿ ಇದ್ದರೂ ಇಷ್ಟೊಂದು ಕಷ್ಟವನ್ನು ಅನುಭವಿಸಬೇಕಾಗುತ್ತಿತ್ತು. ಅಂದಮೇಲೆ ನನ್ನ ಜನರಿಗೆ ಅದೆಷ್ಟು ಕಷ್ಟವಾಗಿರಬೇಕು? ಒತ್ತಾಯದಿಂದ ಸೇರಿಕೊಂಡ ಜನರು ಇಷ್ಟೊಂದು ತ್ಯಾಗ ಮಾಡಬಲ್ಲರೇ?

ತಪ್ಪಿಸಿ ಓಡಿಹೋಗಿ ಶತ್ರುಗಳಿಗೆ ಸುದ್ದಿ ತಿಳಿಸಲು ಪ್ರಯತ್ನಿಸಿದ್ದಕ್ಕೆ ನಾಲ್ವರನ್ನು ವಿಚಾರಣೆಗೆ ಗುರಿಪಡಿಸಿದ್ದು ನಿಜ. ಆದರೆ ಅವರು ನನ್ನ ಆಜ್ಞೆಯಂತೆ ಗುಂಡಿಕ್ಕಲ್ಪಟ್ಟದ್ದು ಸುಳ್ಳು. ಅವರನ್ನು ಗುಂಡಿಕ್ಕಲಾಯಿತೆಂದು ಹೇಳುವ ಸಮಯದಲ್ಲಿ ನಾನು ಜಡ್ಡಿನಿಂದ ಹಾಸಿಗೆ ಹಿಡಿದಿದ್ದೆ. ಏಳಲು ಸಹ ಬರುತ್ತಿದ್ದಿಲ್ಲ ಅಲ್ಲದೆ ಡಿವಿಜನಲ್ ಕಮಾಂಡರನು ಈ ಶಿಕ್ಷೆಗಳನ್ನು ಹಿಂದಿನಿಂದ ರದ್ದುಗೊಳಿಸಿದನು ಮತ್ತು ಶಿಕ್ಷೆಗಳನ್ನು ಎಂದೂ ಕಾರ್ಯಕಾರಿ ಮಾಡಲಿಲ್ಲ.

ನಾನು ಏನಾದರೂ ಮಾಡಿದ್ದರೆ ಸ್ವತಂತ್ರ ಸರಕಾರದ ಸುಸಂಘಟಿತ ಸೈನ್ಯದ ನಿಯಮದಂತೆ ಮಾಡಿರುತ್ತೇನೆ. ಆದುದರಿಂದ ಹಿಂದೀ ಸೈನ್ಯ ಕಾಯದೆ ಮತ್ತು ಹಿಂದುಸ್ತಾನದ ಕ್ರಿಮಿನಲ್ ಕಾಯಿದೆಯಂತೆ ನನ್ನನ್ನು ವಿಚಾರಣೆಗೆ ಗುರಿಪಡಿಸಲು ಬರಲಾರದು. ಮೇಲಾಗಿ ಈ ವಿಚಾರಣೆ ಅಕ್ರಮವಿರುವದು. ಹಿಂದೀ ರಾಷ್ಟ್ರೀಯ ಸೈನ್ಯವನ್ನು ನಾನು ಉದಾತ್ತ ಉದ್ದೇಶದಿಂದಲೇ ಸೇರಿರುತ್ತೇನೆ. ಜಪಾನಿಗಳು ಮರಣ ದಂಡನೆ ವಿಧಿಸಿದ ಅನೇಕರ ಪ್ರಾಣ ರಕ್ಷಣೆ ಮಾಡಿರುತ್ತೇನೆ. ಹಿಂದುಸ್ತಾನದ ನಗರಗಳ ಮೇಲೆ ಬಾಂಬುದಾಳಿ ಮಾಡಿ ಅನಾವಶ್ಯಕವಾಗಿ ನಾಗರಿಕರ ಹಾನಿಯನ್ನು ಮಾಡಬೇಡಿರೆಂದು ನಾನು ಜಪಾನಿಗಳ ಮನವೊಲಿಸಿರುವೆನು. ಅತಿ ಪೂರ್ವದಲ್ಲಿರುವ ಹಿಂದೀಯರು ನಮ್ಮ ಸೇವೆಯನ್ನು ಮನಸಾರೆ ಮೆಚ್ಚಿ, ಆಜಾದ್ ಹಿಂದ್ ಸರಕಾರಕ್ಕೆ ಕೋಟಿಗಟ್ಟಲೆ ಹಣವನ್ನು ಕಾಣಿಕೆ ಕೊಟ್ಟಿರುತ್ತಾರೆ.''

# ಆಜಾದ ಹಿಂದ ಆಂದೋಲನ

## ೧ ಸಿಂಹಾವಲೋಕನ

ಮುಂಬರಿಯುವ ವೀರವೃತ್ತಿಯಿಂದ ಪ್ರತಿಯೊಬ್ಬ ತರುಣ ಭಾರತೀಯನ ಹೃದಯವನ್ನು ಸೂರೆಗೊಂಡು, ಪಟ್ಟಾಭಿಯವರನ್ನು ಹಿಂಗಿಟ್ಟು ರಾಷ್ಟ್ರಪತಿಯಾಗಿ, ಮುಂದೆ ಕಾಲಪರಿವರ್ತನೆಯಿಂದ ತನ್ನ ಶೌರ್ಯಕ್ಕೆ ತಕ್ಕ ಕಾರ್ಯವನ್ನು ಕೈಕೊಳ್ಳಲು ರಾಷ್ಟ್ರಸಭೆಯಲ್ಲಿ ಆಸ್ಪದವಿಲ್ಲದಾಗಲು ಆ ಪದವಿಯನ್ನು ತ್ಯಜಿಸಿ, ಕೊನೆಗೆ ಅತ್ಯಂತ ಆಶ್ಚರ್ಯಕರವಾದ ರೀತಿಯಲ್ಲಿ ಹಿಂದುಸ್ತಾನದಿಂದ ಹೊರಟುಹೋದ ವೀರಾಗ್ರೇಸರ ಸುಭಾಸಚಂದ್ರ ಬೋಸ ಮಾಡಿದ್ದೇನು? ಯುದ್ಧ ಸಮಯದಲ್ಲಿಯ ಆ ಅಸಮ ಸಾಹಸಿಯ ಸಾಹಸ ಕೃತ್ಯಗಳು ಯಾರಿಗೂ ತಿಳಿಯುವಂತಿರಲಿಲ್ಲ. ಈಗ ಮಹಾಯುದ್ಧ ನಿಂತಿದೆ. 'ತಾತ್ಪೂರ್ತಿಕ ಆಜಾದ ಹಿಂದ ಸರಕಾರ'ದ ಮಹಾಮಂತ್ರಿಯಾಗಿ ಭಾರತದ ದಾಸ್ಯ ವಿಮೋಚನೆಗಾಗಿ ಸುಭಾಸ ಮಾಡಿದ ಅದ್ಭುತ ಕಾರ್ಯವು ಇತಿಹಾಸ ರೂಪದಲ್ಲಿ ಬಯಲಿಗೆ ಬರುತ್ತಲಿದೆ.

ಸುಭಾಸ ಮಾತೃಭೂಮಿಯ ವಿಮೋಚನೆಗಾಗಿ ಹಂಬಲಿಸುವ ಕಲಿ. ಆತನ ಕ್ರಾಂತಿ ವಿಚಾರಗಳಿಂದ ತುಂಬಿದ ಮನಸು ಆ ಬಗ್ಗೆ ಅದ್ಭುತವಾದ, ಸ್ವಪ್ನಗಳನ್ನು ಕಾಣುತ್ತಿರುವುದು ಸ್ವಾಭಾವಿಕ. ಆ ಸ್ವಪ್ನಗಳನ್ನು ಸತ್ಯ ಸೃಷ್ಟಿಯನ್ನಾಗಿ ನಿರ್ಮಿಸುವ ಹುಮ್ಮಸ್ಸೂ ಆತನಿಗಿತ್ತು. ಆತ್ಮ ವಿಶ್ವಾಸವೂ ಇತ್ತು. ಯುದ್ಧ ಪರಿಸ್ಥಿತಿ ಆತನ ಮನದೆಣಿಕೆಗೆ ಕಾರ್ಯರೂಪವನ್ನು ಕೊಟ್ಟಿತು. ಪೂರ್ವ ಏಶಿಯಾ ಖಂಡವು ಆತನ ಕಾರ್ಯಕ್ಷೇತ್ರವಾಯಿತು. ಆ ವಿಶಾಲವಾದ ಭೂಭಾಗದಲ್ಲಿ ಅವಿಶ್ರಾಂತವಾಗಿ ಶ್ರಮಿಸಿ, ಭಾರತೀಯ ಸೈನಿಕರನ್ನೂ ನಾಗರಿಕರನ್ನೂ ಭಾರತ ಸ್ವಾತಂತ್ರ್ಯಕ್ಕಾಗಿ ಸಂಘಟಿಸಿ, ಸ್ವತಂತ್ರ ಭಾರತ ಸರಕಾರವನ್ನು ಸ್ಥಾಪಿಸಿ, 'ಆಜಾದ ಹಿಂದ ಫೌಜ'ನ್ನು ಕಟ್ಟಿ ಹೋರಾಡಿದ 'ನೇತಾಜಿ'ಯ ಕರ್ತೃತ್ವಕ್ಕೆ ಜಗತ್ತೇ ಬೆರಳು ಕಚ್ಚುವಂತಾಗಿದೆ. ಈ ಘನಘೋರ ಪ್ರಯತ್ನವು ಅನೇಕಕಾರಣ ಸನ್ನಿವೇಶ

ಗಳಿಂದ ವಿಫಲವಾಗಿ ಕೇವಲ ಪ್ರಯೋಗವಾಗಿಯೇ ಕೊನೆಗಂಡರೂ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಮಹತ್ವದ ಪ್ರಕರಣ ವಾಗದಿರದು. ಇದು ಬೇರೆ ಬೇರೆ ದೇಶದ, ಬೇರೆ ಬೇರೆ ದೃಷ್ಟಿಕೋನದ ಇತಿಹಾಸಕಾರರಿಂದ ಬೇರೆ ಬೇರೆಯಾಗಿ ವರ್ಣಿತವಾದೀತು. ಆದರೆ ನಮಗೆ, ಭಾರತೀಯರಿಗೆ ಅತ್ಯಂತ ಅಭಿಮಾನಾಸ್ಪದವಾದ ಘಟನೆ.

'ನೇತಾಜಿ' ಸುಭಾಸ ಅನುಸರಿಸಿದ ದಾರಿ ತಪ್ಪೋ ಒಪ್ಪೋ ಇನ್ನೂ ನಿರ್ಣಯವಾಗದಿರಬಹುದು. ಆದರೆ ರಣರಂಗದ ನೆತ್ತರಿನ ಕೆಸರಿನ್ನೂ ಆರದಿರುವ ಈ ಕಾಲದಲ್ಲಿ ಈವರೆಗೆ ದೊರೆತ ಸಂಗತಿಗಳಿಂದ 'ನೇತಾಜಿ'ಯ ಸರಕಾರ ಜಪಾನದ ಕೈಗೊಂಬೆಯಾಗಿರಲಿಲ್ಲ. ಭಾರತವು ಸಂಪೂರ್ಣ ಸ್ವತಂತ್ರವಾಗಬೇಕು, ಯಾವ ಪರಕೀಯ ಸತ್ತೆಗೂ ಒಳಗಾಗಬಾರದು ಎಂಬುದೇ ಈ ಯುದ್ಧದ ಧ್ಯೇಯವಾಗಿತ್ತು, ನೀತಿಯಾಗಿತ್ತು ಎಂದು ಮನಸಟ್ಟಾಗುವುದು. ಮಿತ್ರಪಕ್ಷದ ಶತ್ರುರಾಷ್ಟ್ರಗಳು ಈ ಸರಕಾರಕ್ಕೆ ಮನ್ನಣೆ ಕೊಟ್ಟಿರಬಹುದು, ಈ ಸಂಘಟನೆಗೆ ಅಲ್ಪಾಂಶದಿಂದ ಜಪಾನದ ಪ್ರೇರಣೆ ಕಾರಣವಾಗಿರಬಹುದು. ಆದರೆ ನೇತಾಜಿ ತನ್ನ ಸರಕಾರವನ್ನು ಹೆಚ್ಚಾಗಿ ಪರಕೀಯ ಸತ್ತೆಯ ಋಣದಲ್ಲಿ ಕೆಡವದೆ, ಬಹ್ವಂಶದಿಂದ ಜನತೆಯ ಉದಾರ ಸಹಾಯದಿಂದಲೇ ಆಂದೋಲನವನ್ನು ನಡೆಯಿಸಿದುದನ್ನು ಈ ಇತಿಹಾಸದಲ್ಲಿ ಕಾಣಬಹುದು.

ಪ್ರಯೋಗವು ನಿಷ್ಫಲವಾಯಿತೇನೋ ನಿಜ. ಆದರೇನಾಯಿತು? ಅದೊಂದು ಅಭೂತಪೂರ್ವವಾದ ಪ್ರಯೋಗ. ದೇಶಪ್ರೇಮದಿಂದ ಉಕ್ಕುವ, ವೀರತ್ವದಿಂದ ಕಣ್ಣು ಕುಕ್ಕುವ, ತ್ಯಾಗ ಸಹಿಷ್ಣುತೆಗಳಿಂದ ಆದರ್ಶಿಸುವ ಮಹಾನ್ ಪ್ರಯೋಗವದು. ಜಾತಿ-ಪಕ್ಷ ಭೇದಗಳನ್ನಳಿದ ಏಕೀಭಾವದ ಸ್ವಾತಂತ್ರ್ಯಾಭಿಲಾಷೆಯ ಪ್ರಯೋಗವದು. ಭಾರತೀಯರು ಯೋಧರಲ್ಲವೆಂಬ ಅಪಪ್ರಚಾರಕ್ಕೆ ಅರದಾಳ ಬಡಿಯುವ, ಭ್ರಮೆಯನ್ನು ಹೋಗಲಾಡಿಸುವ, ಆತ್ಮವಿಶ್ವಾಸವನ್ನು ಹೆಚ್ಚಿಸುವ ಪ್ರಯೋಗವದು. ಇಂತಹ ಜಾತಿ ಯುದ್ಧಮಾಡುವುದಲ್ಲ, ಇಂತಹ ವ್ಯವಸಾಯಿ ಯುದ್ಧ ಮಾಡಲಾರ ಎಂಬ ಯುಕ್ತಿವಾದವನ್ನು ತೊಡೆದುಹಾಕುವುದು ಈ ಪ್ರಯೋಗ. ಕ್ಯಾ. ಲಕ್ಷ್ಮಿ ಮೊದಲಾದ ಮಹಿಳೆಯರು ತಾವು ಕೇವಲ ಶುಶ್ರೂಷೆ

ಮಾಡುವ ತೋತ್ತುಗಳಲ್ಲ, ತಮಗೂ ಪುರುಷರಿಗೆ ಸಮಾನ ಮಾನ ಅಧಿಕಾರ ಬೇಕು, ಕೈದು ಕೊಡಿರಿ, ಕದನ ಕಣಕ್ಕೆ ಬಿಡಿರಿ ಎಂದು ನೇತಾಜಿಗೆ ದುಂಬಾಲ ಬಿದ್ದು ಒಪ್ಪಿಗೆ ಪಡೆದು ಸ್ಫೂರ್ತಿಯಿಂದ ಮುಂದಾದರು. ಝಾಂಸಿ ಲಕ್ಷ್ಮೀ ಬಾಯಿ, ಕಿತ್ತೂರ ಚೆನ್ನಮ್ಮ ಮೊದಲಾದವರ ವೀರ ಚರಿತ್ರೆ ಹಳೆಯದಾಗಿತ್ತು: ಅದನ್ನು ಮರಳಿ ಪ್ರತ್ಯಕ್ಷವಾಗಿ ಕಣ್ಮುಂದೆ ನಿಲ್ಲಿಸಿತು ಈ ಪ್ರಯೋಗ. ಒಟ್ಟಾರೆ ಹಿಂದುಸ್ಥಾನಕ್ಕೆ ಹೊಸ ವಿಚಾರದ ದಿಸೆಯನ್ನು ತೋರಿಸುವ, ಹೊಸ ಕಲ್ಪನೆಯನ್ನು ಕೊಡುವ ಇನ್ನೂ ರಣಗರ್ಜನೆಯ ನಿನಾದಪಡಗ ದಿರುವ ವರ್ತಮಾನಕಾಲದ ಇತಿಹಾಸವೀ ಪ್ರಯೋಗ.

'ನೇತಾಜಿ'ಯ ಮುಖ್ಯ ಅನುಯಾಯಿಗಳು, ಆಜಾದ ಹಿಂದ ಸೇನೆಯ ಅಧಿಕಾರಿಗಳು ಯುದ್ಧಾಪರಾಧಿಗಳೆಂಬ ಆಪಾದನೆಗಾಗಿ ವಿಚಾರಣೆಗೆ ಗುರಿಯಾಗಿದ್ದಾರೆ. ನೇತಾಜಿ ಸುಭಾಸ ಜಪಾನದಲ್ಲಿ ತಾ॥ ೧೮–೮–೪೫ ನೆಯ ದಿನ ವಿಮಾನ ಅಪಘಾತದಲ್ಲಿ ವೀರಸ್ವರ್ಗವನ್ನೈದಿದನೆಂದು ಪ್ರಸಿದ್ಧ ವಾಗಿದೆ. ಆತ ಬದುಕಿದ್ದರೆ, ಸಿಕ್ಕಿದ್ದರೆ ಮುಖ್ಯಾಪರಾಧಿಯೆಂದು ನ್ಯಾಯಾಲಯದ ಕಟಾಂಜನದೊಳಗೆ ನಿಲ್ಲಿಸಬಹುದಿತ್ತು. ಇರಲಿ. ಆಜಾದ ಹಿಂದ ಫೌಜದ ಅಧಿಕಾರಿಗಳ ಕಾರ್ಯ ಕಾಯದೆಯ ಒರೆಗಲ್ಲಿನಲ್ಲಿ ಎಂತಹ ದೆಂದು ನಿರ್ಣಯವಾಗುತ್ತದೋ ಆಗಲಿ, ಅವರಿಗೆ ಏನಾಗುತ್ತದೋ ಆಗಲಿ. ಆದರೆ ಈ ಸ್ವತಂತ್ರ ಭಾರತಸೇನೆ ಹಿಂದುಸ್ಥಾನದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸಕ್ಕೆ ಒದಗಿಸಿದ ಸಂಪತ್ತು ಅಮೂಲ್ಯವಾದುದೆಂಬುದರಲ್ಲಿ ಸಂದೇಹವಿಲ್ಲ.

## ೨ ಆಜಾದ ಹಿಂದ ಲೀಗ

ಕಳೆದ ಕೆಲವು ವರ್ಷಗಳ ಬ್ರಿಟಿಶ್ ಆಡಳಿತ ಮಲಯದ ಹಿಂದೀಯರ ಅಂತರಂಗದಲ್ಲಿ ಅಸಂತೋಷವನ್ನು ಅಥವಾ ಬ್ರಿಟಿಶರ ಬಗ್ಗೆ ಗುಪ್ತ ವಿರೋಧ ಭಾವನೆಯನ್ನು ಹುಟ್ಟಿಸಿತ್ತು. ಜೀವನದ ವೆಚ್ಚ ಹೆಚ್ಚಿದುದರಿಂದ ತಮ್ಮ ವೇತನವನ್ನು ಹೆಚ್ಚಿಸಬೇಕೆಂದು ಬೇಡುವ ಇಸ್ಟೇಟ್ ಕೂಲಿಕಾರರ ಮೇಲೆ ಗುಂಡು ಹಾರಿಸಲಾಗಿತ್ತು; ಬ್ರಿಟಿಶರ ಒಡೆತನದ ವೃತ್ತಪತ್ರಗಳಿಗೆ ಸುದ್ದಿ ಪ್ರಕಟಿಸುವುದಕ್ಕೆ ಸ್ವಾತಂತ್ರ್ಯವಿದ್ದಿತು; ಹಿಂದೀಯರ ಒಡೆತನದ ಪತ್ರಿಕೆಗಳಿಗೆ ನಿಯಂತ್ರಣಾಜ್ಞೆ ವಿಧಿಸಲಾಗಿತ್ತು. ಇಂತಹ ಬೇರೆ ಕೆಲ

ಕಾರಣಗಳಿಂದ ಆ ವಿರೋಧ ಭಾವನೆ ಇನ್ನಷ್ಟು ಪುಟಗೊಂಡಿತ್ತು. ಹೀಗೆ ಹಿಂದೀ ನಾಗರಿಕರಲ್ಲಿ ಮಾತ್ರವಲ್ಲ. ಹಿಂದೀ ಸೇನೆಯಲ್ಲಿ ಹೆಚ್ಚಾಗಿ ಅಧಿಕಾರಿಗಳಲ್ಲಿ ಕೂಡ ಅಸಂತುಷ್ಟಿ ಮನೆ ಮಾಡಿತ್ತು. ಅದಕ್ಕೆ ಆಗಾಗ ಅನುಭವಕ್ಕೆ ಬಂದ ವರ್ಣದ್ವೇಷವೇ ಕಾರಣ. ಸಿಂಗಾಪುರದ ಈಸುವ ಕ್ಲಬ್ಬಿನ ಸದಸ್ಯರಾಗಲು ಮನ್ನಣೆ ಪಡೆಯುವುದಕ್ಕೆ ಹಿಂದೀ ಅಧಿಕಾರಿಗಳು ಭಗೀರಥ ಪ್ರಯತ್ನ ಮಾಡಬೇಕಾಯಿತು. ಇಷ್ಟಾಗಿಯೂ ಈಸುವುದಕ್ಕಾಗಿ ಕಟ್ಟಿಸಿದ ಕೊಳದಲ್ಲಿ ಅವರನ್ನು ಈಸುವುದಕ್ಕೆ ಬಿಡಲಿಲ್ಲ. ಸಾಕಷ್ಟು ಸಂರಕ್ಷಕ ವಿಮಾನದಲವನ್ನು ಕೊಡದೆಯೂ ಸಾಕಷ್ಟು ಸಾಹಿತ್ಯಗಳಿಲ್ಲದೆಯೂ ತಮ್ಮನ್ನು ಯುದ್ಧಕ್ಕೆ ಕಳಿಸಲಾಗುತ್ತಿದೆ, ತಮಗೆ ನ್ಯಾಯ ದೊರೆಯುತ್ತಿಲ್ಲ ಎಂಬ ಭಾವನೆ ದಂಡಿನಲ್ಲಿ ಹಬ್ಬಿತ್ತು. ಹೀಗಾಗಿ ಮಲಯದಲ್ಲಿ ಜಪಾನಿಗಳು ಬ್ರಿಟಿಶರನ್ನು ಗೆದ್ದ ಬಳಿಕ ಅಲ್ಲಿಯ ಭಾರತೀಯರು ಜಪಾನಿಗಳನ್ನು ಸಹಕರಿಸಿದರು; ಅವರ ಬಗ್ಗೆ ಪ್ರೀತಿಯಾಗಲಿ ಶ್ರದ್ಧೆಯಾಗಲಿ ಇತ್ತೆಂದಲ್ಲ.

ಅಲ್ಲಿಯ ಭಾರತೀಯರು ಸಂಘಟಿತರಾಗಲು ಕೆಲವಂಶದಿಂಡ ಜಪಾನಿಗಳ ಪ್ರೇರಣೆಯೂ ಕಾರಣ. ಸಿಂಗಾಪುರದ ಪತನವಾಗಿ (೧೫-೨-೧೯೪೨) ತಮ್ಮ ವಶವಾದ. ಬಳಿಕ ಬ್ರಿಟಿಶರ ವಿಷಯದಲ್ಲಿ ಭಾರತೀಯರೊಳಗಿದ್ದ ಅಸಂತೋಷದ ಲಾಭವನ್ನು ತೆಗೆದುಕೊಳ್ಳದೆ ಬಿಟ್ಟಾರೇ? ಅದಕ್ಕಾಗಿ ಭಾರತೀಯ ಜನಾಂಗದ ಸ್ವಾತಂತ್ರ್ಯಾಭಿಲಾಷೆಗೆ ಪುಟಕೊಟ್ಟರೆ ತಮ್ಮ ಬೇಳೆ ಬೇಯುವುದೆಂದು ಅವರು ಬಗೆದರು. ೧೬-೨-೧೯೪೨ನೆಯ ದಿವಸ ಕೆಲವು ಹಿಂದೀ ಪ್ರಮುಖರನ್ನು ತಮ್ಮ ಠಾಣ್ಯಕ್ಕೆ ಕರೆಯಿಸಿಕೊಂಡರು. ಅಲ್ಲಿ ಜಪಾನೀ ಸೈನ್ಯಾಧಿಕಾರಿಗಳು, "ಬ್ರಿಟಿಶರ ಪ್ರಭುತ್ವವು ಹೊಯ್ದಾಡುತ್ತಲಿದೆ; ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಅದನ್ನು ಇಕ್ಕರಿಸುವುದಕ್ಕೆ ಇದು ಒಳ್ಳೆಯ ಸಂಧಿ; ಆ ಕೆಲಸದಲ್ಲಿ ಜಪಾನವು ನೆರವಾಗಲು ಸಿದ್ಧವಿದೆ; ಭಾರತೀಯರು ಮನಸಾ ಬ್ರಿಟಿಶ ಪ್ರಜೆಗಳಾಗಿಲ್ಲವೆಂಬುದು ನಮಗೆ ಗೊತ್ತಿದೆ; ಆದುದರಿಂದ ಅವರನ್ನು ನಾವು ಹಗೆಯ ಕಡೆಯವರೆಂದು ಎಣಿಸುವುದಿಲ್ಲ; ಭಾರತೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಲು 'ಭಾರತೀಯ ಸ್ವಾತಂತ್ರ್ಯ ಸಂಘ'ವನ್ನು ಸಂಘಟಿಸಿರಿ" ಎಂದು ಮುಂತಾಗಿ

ಅವರಿಗೆ ಹೇಳಿದರು. ಹಿಂದೀಯರು ಈ ಸೂಚನೆಯ ಬಗ್ಗೆ ವಿಚಾರ ಮಾಡಿ ತಿಳಿಸುವುದಾಗಿ ಹೇಳಿದರು.

ಸಿಂಗಾಪುರದ ಪತನದ ಕಾಲಕ್ಕೆ ಬ್ರಿಟಿಶ್-ಆಸ್ಟ್ರೇಲಿಯನ್ ಸೈನ್ಯದಿಂದ ಹಿಂದೀ ಸೈನ್ಯದ ಸಂಬಂಧ ತಪ್ಪಿ ಹೋಯಿತು. ಆಗ ಆತ್ಮ-ರಕ್ಷಣೆಗಾಗಿ ಹಿಂದೀಯರು ಸ್ವತಂತ್ರ ರಾಷ್ಟ್ರೀಯ ಸೈನ್ಯವನ್ನು ರಚಿಸಿಕೊಳ್ಳಬೇಕೆಂದೂ ಪ್ರಸಂಗ ಬಂದೊಡನೆ ತಿರುಗಿ ಬ್ರಿಟಿಶರನ್ನು ಕೂಡಿಕೊಳ್ಳಬೇಕೆಂದೂ ಬ್ರಿಟಿಶ್ ಅಧಿಕಾರಿಗಳು ಹೇಳಿದರೆಂದು ಈಚೆಗೆ ಸುದ್ದಿಯೊಂದು ಪ್ರಕಟವಾಗಿದೆ. ಅಲ್ಲದೆ ಮೇ. ಜ. ಭೋಸಲೆಯವರಿಗೂ ಕ. ಎಂ. ಅರ್ಶದ್‌ಅವರಿಗೂ ಹಿಂದೀ ಸ್ವತಂತ್ರ ಸೇನೆಯ ಸೇನಾಪತಿಗಳೆಂದು ಸಂಬೋಧಿಸಿ ಪತ್ರವನ್ನು ಕೂಡ ಬರೆದಿದ್ದರಂತೆ. ೧/೧ಳ ಪಂಜಾಬ ದಳದ ಸುಬೇದಾರ ಮೇಜರ ಬಾಬುರಾಮರು, ದಿಲ್ಲಿ ಕೆಂಪುಕೋಟೆಯಲ್ಲಿ ನಡೆದ ಸುಭಾಸ ಸೇನಾಧಿಕಾರಿಗಳ ವಿಚಾರಣೆಯಲ್ಲಿ ಸರಕಾರದ ಪರವಾಗಿ ಹೇಳಿದ ಸಾಕ್ಷ್ಯದಲ್ಲಿ ತಿಳಿಸಿದ ಸಂಗತಿಯಂತೂ ಇನ್ನೂ ವಿಚಿತ್ರವಾಗಿದೆ. “ಸಿಂಗಾಪುರವು ಬಿದ್ದ ಬಳಿಕ ೧೭-೨-೧೯೪೨ನೆಯ ದಿನ ಬ್ರಿಟಿಶ್ ಪ್ರತಿನಿಧಿಯೆಂದು ಹೇಳಿಕೊಳ್ಳುವ ಲೆ ಕ. ಹಂಟರವರು ಹಿಂದೀ ಯುದ್ಧ ಕೈದಿಗಳನ್ನು ಕುರಿತ ಭಾಷಣ ಮಾಡುತ್ತ, ‘ನಾವೀಗ ನಿಮ್ಮನ್ನು ಜಪಾನಿಗಳಿಗೆ ಒಪ್ಪಿಸುತ್ತಿದ್ದೇವೆ. ಬ್ರಿಟಿಶ್ ಸೈನ್ಯದಲ್ಲಿದ್ದಾಗ ನೀವು ನಮ್ಮ ಆಜ್ಞೆ ಪಾಲಿಸುತ್ತಿದ್ದಂತೆ ಇನ್ನು ಜಪಾನಿಗಳಿಗೆ ವಿಧೇಯರಾಗಬೇಕೆಂದು ಹೇಳಿದರು. ಬಳಿಕ ಜಪಾನಿ ಮೇಜರ ಫುಜಿವಾರಾರವರು ‘ನಾವೂ ಇವರನ್ನು ಇಟ್ಟುಕೊಳ್ಳುವುದಿಲ್ಲ. ಕ್ಯಾ. ಮೋಹನಸಿಂಗರಿಗೆ ಒಪ್ಪಿಸುತ್ತೇವೆ. ಅವರೇ ಇವರ ಸೇನಾಪತಿಗಳು’ ಎಂದರು. ‘ಬ್ರಿಟಿಶರೂ ನಿಮ್ಮನ್ನು ಬಿಟ್ಟಿದ್ದಾರೆ; ಜಪಾನಿಗಳೂ ಬಿಟ್ಟಿದ್ದಾರೆ. ನಾವೀಗ ನಮ್ಮೆಲ್ಲರ ಭಾರತ ಸ್ವಾತಂತ್ರ್ಯ ಸಂಪಾದನೆಗಾಗಿ ಆಜಾದ ಹಿಂದ ಸೇನೆ ಕಟ್ಟುತ್ತಿದ್ದೇವೆ. ನೀವು ಇದರಲ್ಲಿ ಸೇರಲೊಪ್ಪುವಿರಾ?’ ಎಂದು ಸಿಂಗರು ಕೇಳಿದರು. ನೆರೆದವರೆಲ್ಲರೂ ಸಂತೋಷವನ್ನು ಸೂಚಿಸಿದರು.” ಎಂಬುದು ಆ ಸಾಕ್ಷಿಯ ಹೇಳಿಕೆ. ಇದೆಲ್ಲವನ್ನು ಮನದಂದರೆ ಆಜಾದ ಹಿಂದ ಸಂಘಟನೆಯ ಮೂಲದಲ್ಲಿ ಬ್ರಿಟಿಶರ ಕೈವಾಡವೂ ಇದೆಯೆಂದು ಹೇಳಬೇಕಾಗುತ್ತದೆ.

ಬಳಿಕ, ತೀರ್ಮಾನಿಸುವ ಮೊದಲು ಮಲಯದ ಕೇಂದ್ರ ಹಿಂದೀ ಸಂಘಟನೆಯ ಅಧ್ಯಕ್ಷನನ್ನೂ ಮಲಯದ ನಾನಾಭಾಗಗಳ ಹಿಂದೀ ಪ್ರಮುಖರನ್ನೂ ಕಾಣಬಯಸುತ್ತೇವೆಂದು ಹಿಂದೀಯರು ಸೇನಾಧಿಕಾರಿಗೆ ತಿಳಿಸಿದರು. ೧೯೪೨ನೆಯ ಮಾರ್ಚ್ ೯-೧೦ನೆಯ ತಾರೀಖುಗಳಲ್ಲಿ ಸಿಂಗಾಪುರ ದಲ್ಲಿ ಹಿಂದೀ ಮುಂದಾಳುಗಳ ಸಭೆ ಕೂಡಿತು. ಇಷ್ಟರೊಳಗಾಗಿ ಚರ್ಚೆಗಾಗಿ ಮಲಯ-ಥ್ಯಾಲಂಡಗಳ ಪ್ರತಿನಿಧಿಗಳನ್ನು ಟೋಕಿಯೋಕ್ಕೆ ಕಳಿಸಲು ಕರೆಬಂದಿತ್ತು. ಆದರ ಬಗ್ಗೆ ಪರ್ಯಾಲೋಚಿಸಿ ಮಲಯದ ಮುಂದಾ ಳುಗಳ ಸಭೆ ಟೋಕಿಯೋಕ್ಕೆ 'ಶಿಷ್ಟಮಂಡಲ' ವನ್ನು ಕಳಿಸತಕ್ಕುದೆಂದು ನಿರ್ಧರಿಸಿತು. ಜಪಾನಿಗಳು ಬಯಸಿದುದು ಶಿಷ್ಟಮಂಡಲವನ್ನಲ್ಲ, 'ಅಧಿಕೃತ ಪ್ರತಿನಿಧಿ' ಗಳನ್ನು. ಆದರೆ 'ಇಂಡಿಯನ್ ಇಂಡಿಪೆಂಡನ್ಸ ಲೀಗಿ'ನವರು ಯಾವುದೊಂದು ನಿಶ್ಚಿತ ನಿರ್ಣಯದಿಂದ ಬದ್ಧರಾಗಲೊಲ್ಲದೆ ಹೀಗೆ ಮಾಡಿದರು.

ಟೋಕಿಯೋದ ಪರಿಷತ್ತು ಮಾರ್ಚ ೨೮ ರಿಂದ ೩೦ರ ವರೆಗೆ ನಡೆಯಿತು. ಮಲಯದ ಶಿಷ್ಟಮಂಡಲವಲ್ಲದೆ ಹಾಂಕಾಂಗ-ಶಾಂಘಾಯ-ಜಪಾನಗಳಲ್ಲಿಯ ಪ್ರತಿನಿಧಿಗಳೂ ಅಲ್ಲಿ ಕೂಡಿದ್ದರು. ನಡುದಾರಿಯಲ್ಲಿ ವಿಮಾನವು ಮುರಿದುಬಿದ್ದುದರಿಂದ ಥ್ಯಾಲಂಡದ ಪ್ರತಿನಿಧಿ ಪರಲೋಕಕ್ಕೆ ತೆರಳಿದ; ಟೋಕಿಯೋಕ್ಕೆ ತಲುಪಲಿಲ್ಲ. ೧) ಪೂರ್ವ ಏಸಿಯದ ಭಾರತೀಯರಲ್ಲಿ ಸ್ವಾತಂತ್ರ್ಯ ಚಳವಳಿಯನ್ನು ಆರಂಭಿಸಲು ತಕ್ಕ ಸಮಯ ಒದಗಿದೆ; ೨) ಪರಕೀಯ ವರ್ಚಸ್ವವಾಗಲಿ ಹಸ್ತಕ್ಷೇಪವಾಗಲಿ, ಯಾವುದೇ ಬಗೆಯ ನಿಯಂತ್ರಣವಾಗಲಿ ಇಲ್ಲದ ಸಂಪೂರ್ಣ ಸ್ವಾತಂತ್ರ್ಯವೇ ಚಳವಳಿಯ ಧ್ಯೇಯ; ೩) ಹಿಂದುಸ್ಥಾನದ ಮೇಲೆ ಸಶಸ್ತ್ರ ದಾಳಿ ಮಾಡುವುದು 'ಆಜಾದ ಹಿಂದ ಸೇನೆ' ಮಾತ್ರವೇ, ಭಾರತೀಯನ ನೇತೃತ್ವದಲ್ಲಿಯೇ. ಭಾರತೀಯ ಸ್ವಾತಂತ್ರ್ಯ ಸಂಘ (ಇಂಡಿಯನ್ ಇಂಡಿಪೆಂಡನ್ಸ ಲೀಗ್)ದ ಕೌನ್ಸಿಲ್ ಆಫ್ ಆ್ಯಕ್ಶನ್ನಿನ ಬೇಡಿಕೆಯಂತೆ ಭೂ-ಜಲ-ಆಕಾಶ ಬಲಗಳ ಸಹಾಯವನ್ನು ಜಪಾನೀ ಅಧಿಕಾರಿಗಳು ನೀಡಬೇಕು; ೪) ಹಿಂದುಸ್ತಾನದ ಭಾವೀ ರಾಜ್ಯಘಟನೆಯನ್ನು ರಚಿಸುವ ಕೆಲಸವನ್ನು ಭಾರತೀಯ ಲೋಕಪ್ರತಿನಿಧಿಗಳಿಗೇ ಪೂರ್ಣವಾಗಿ ಒಪ್ಪಿಸಲಾಗುವುದು—ಎಂದು ಪರಿಷತ್ತಿನಲ್ಲಿ ಗೊತ್ತಾಯಿತು.

# ೩ ಲೀಗದ ಧ್ಯೇಯ-ಧೋರಣ

ಭಾರತೀಯ ಸ್ವಾತಂತ್ರ್ಯದ ಆಂದೋಲನಕ್ಕೆ ಅಧಿಕೃತ ಸ್ವರೂಪ ವನ್ನು ಕೊಡುವುದಕ್ಕಾಗಿ, ಪೂರ್ವ ಏಶಿಯದ ಎಲ್ಲ ಭಾಗಗಳ ಪ್ರತಿನಿಧಿ ಗಳನ್ನೊಳಗೊಂಡ ಹೆಚ್ಚು ಪ್ರಾತಿನಿಧಿಕವಾದ ಪರಿಷತ್ತನ್ನು ಬಂಕಾಕದಲ್ಲಿ ಕರೆಯಲಾಯಿತು. ಅದು ೧೯೪೨ನೆಯ ಜೂನ್ ೧೫ರಿಂದ ೨೩ರ ವರೆಗೆ ನಡೆಯಿತು. ಜಪಾನದಿಂದ, ಮಂಚುಕುವೊದಿಂದ, ಹಾಂಕಾಂಗದಿಂದ, ಬ್ರಹ್ಮದೇಶದಿಂದ, ಬೋರ್ನಿಯೋದಿಂದ, ಮಲಯದಿಂದ, ಥಾಯಲಂಡದಿಂದ ಹಿಂದೀ ಪ್ರತಿನಿಧಿಗಳು ಬಂದಿದ್ದರು. ಅಲ್ಲದೆ ಮಲಯ-ಹಾಂಕಾಂಗಗಳಲ್ಲಿಯ ಯುದ್ಧ ಕೈದಿಗಳಾದ ಹಿಂದೀ ಸೈನ್ಯದ ಪ್ರತಿನಿಧಿಗಳೂ ಬಂದಿದ್ದರು. ಒಟ್ಟಿಗೆ ನೂರಕ್ಕೆ ಮಿಕ್ಕು ಸೇರಿತ್ತು ಜನ. ಈ ಪರಿಷತ್ತಿಲ್ಲಾದ ಗೊತ್ತುವಳಿಗಳ ಆಧಾರದ ಮೇಲೆಯೇ ಎಲ್ಲ ಪ್ರದೇಶಗಳಲ್ಲಿ ಭಾರತೀಯ ಸ್ವಾತಂತ್ರ್ಯ ಚಳವಳಿಯನ್ನು ಹೂಡಲಾಯಿತು.

ಆ ಸ್ವಾತಂತ್ರ್ಯ ಚಳವಳಿಗೆ ಆಧಾರಭೂತವಾದ ಆಜಾದ ಹಿಂದ ಪರಿಷತ್ತಿನ ಗೊತ್ತುವಳಿಗಳಲ್ಲಿ ಕೆಲವು ಇಂತಿವೆ :—

೧. ಟೋಕಿಯೋ ಪರಿಷತ್ತು ವ್ಯಕ್ತಪಡಿಸಿದ, ಯಾವುದೇ ಬಗೆಯ ಪರಕೀಯ ನಿಯಂತ್ರಣವಿಲ್ಲದ ಸಂಪೂರ್ಣ ಸ್ವಾತಂತ್ರ್ಯವನ್ನು ಹಿಂದುಸ್ಥಾ ನಕ್ಕೆ ತೀವ್ರವೇ ದೊರೆಕಿಸುವುದಕ್ಕಾಗಿ ಚಳವಳಿ ಹೂಡಬೇಕು.

೨. (ಅ) ಸ್ವತಂತ್ರ ಭಾರತ ಆಂದೋಲನದ ಧ್ಯೇಯಮಂತ್ರ-ಐಕ್ಯ, ಶ್ರದ್ಧೆ, ತ್ಯಾಗ. (ಆ) ಭರತಖಂಡವು ಅಖಂಡವಾದದ್ದು, ಅವಿಭಾಜ್ಯ ವಾದದ್ದು. (ಇ) ಈ ಆಂದೋಲನದ ಚಟುವಟಿಕೆಗಳಲ್ಲಿಯೂ ರಾಷ್ಟ್ರೀಯ ದೃಷ್ಟಿ ಇರಬೇಕು. ಧರ್ಮ, ಜಾತಿ, ಪಂಥಗಳ ದೃಷ್ಟಿ ಇರಕೂಡದು. (ಈ) ಹಿಂದುಸ್ಥಾನದಲ್ಲಿ ಜನತೆಯ ನಿಜವಾದ ಹಿತವನ್ನು ನೋಡುವ 'ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ಸೇ' ಏಕಮೇವ ರಾಜಕೀಯ ಸಂಸ್ಥೆ ಯಾಗಿರುವುದರಿಂದ ಹಿಂದುಸ್ಥಾನದ ಏಕಮೇವ ಪ್ರತಿನಿಧಿಯೆಂದು ಮನ್ನಣೆ ಅದಕ್ಕೇ ಸಲ್ಲಬೇಕು. ಈ ಆಂದೋಲನದ ಕಾರ್ಯಕ್ರಮ ಕಾರ್ಯಪದ್ಧತಿ ಗಳು ಕಾಂಗ್ರೆಸ್ಸಿನ ಧ್ಯೇಯ-ಹೇತುಗಳಿಗೆ ಸುಸಂಗತವಾಗಿರುವಂತೆ ದಿಗ್ದರ್ಶಿಸ

ಬೇಕು, ನಿಯಂತ್ರಿಸಬೇಕು. (ಉ) ಹಿಂದುಸ್ತಾನದ ಭಾವೀ ರಾಜ್ಯ ಘಟನೆಯನ್ನು ರಚಿಸುವವರು ಭಾರತೀಯ ಜನಪ್ರತಿನಿಧಿಗಳು ಮಾತ್ರವೆ.

೩. ಆಜಾದ ಭಾರತ ಆಂದೋಲನವನ್ನು ನಡೆಯಿಸಲು ಆಜಾದ ಭಾರತ ಸಂಘವನ್ನು ಸಂಘಟಿಸಬೇಕು.

೪. ಆಜಾದ ಭಾರತ ಸಂಘವು, ಹಿಂದೀ ಸೈನಿಕರಿಂದಲೂ ಹಿಂದೀ ಸ್ವಾತಂತ್ರ್ಯಕ್ಕಾಗಿಯೂ ಸೈನ್ಯಸೇವೆಗಾಗಿಯೂ ಕೂಡಿಸಿದ ನಾಗರಿಕ ರಿಂದಲೂ ಒಡಗೂಡಿದ 'ಆಜಾದ ಹಿಂದ ಸೇನೆ' ಯನ್ನು ಕಟ್ಟುವ ಕೆಲಸ ವನ್ನು ಕೂಡಲೆ ಕೈಕೊಳ್ಳತಕ್ಕದು.

೫. ಆಜಾದ ಹಿಂದ ಸೇನೆಯ ಸಂಘಟನೆ-ನಿಯಂತ್ರಣಾದಿ ಕಾರ್ಯ ಗಳೆಲ್ಲ ಭಾರತೀಯರ ಕೈಯೊಳಗೇ ಇರಬೇಕು.

೬. ಮೊಟ್ಟ ಮೊದಲಿನಿಂದಲೇ ಜಪಾನದ ಮತ್ತು ಇತರ ಮಿತ್ರ ರಾಷ್ಟ್ರಗಳ ಸೈನ್ಯಗಳಿಗೆ ಸರಿಸಮಾನವಾದ ಸ್ಥಾನಮಾನ ಅಧಿಕಾರಗಳು ಈ ಆಜಾದ ಹಿಂದ ಸೇನೆಗೆ ಸಲ್ಲಬೇಕೆಂಬುದು ಈ ಪರಿಷತ್ತಿನ ಮನಃಪೂರ್ವಕ ವಾದ ಇಚ್ಛೆ.

೭. (ಅ) ಹಿಂದುಸ್ತಾನಕ್ಕೆ ರಾಷ್ಟ್ರೀಯ ಸ್ವತಂತ್ರ್ಯವನ್ನು ಗಳಿಸುವು ದಕ್ಕಾಗಿ ಮತ್ತು ಕಾಪಾಡಿಕೊಳ್ಳುವುದಕ್ಕಾಗಿ, (ಆ) ಹಿಂದುಸ್ತಾನದ ಸ್ವಾತಂತ್ರ್ಯ ಸಾಧನೆಯ ಉದ್ದೇಶಕ್ಕೆ ಸಹಾಯಕವಾದ ಇತರ ಕಾರ್ಯ ಗಳಿಗಾಗಿ ಆಜಾದ ಹಿಂದ ಸೇನೆಯನ್ನು ಉಪಯೋಗಿಸುವುದು.

೮. ಆಜಾದ ಹಿಂದ ಸೇನೆಯ ಸೈನಿಕನೂ ಅಧಿಕಾರಿಯೂ ಆಜಾದ ಹಿಂದ ಸಂಘದ ಸದಸ್ಯನಾಗಿರಬೇಕು; ಆ ಸಂಘದಲ್ಲಿ ಮಾತ್ರವೇ ನಿಷ್ಠೆ ಯುಳ್ಳವನಾಗಿರಬೇಕು.

೯. ಆಜಾದ ಹಿಂದ ಸೇನೆಯ ನಿಯಂತ್ರಣವು ಕೌನ್ಸಿಲ್ ಆಫ್ ಆ್ಯಕ್ಶನ್ನಿನ ಕಡೆಗಿರಬೇಕು. ಈ ಕೌನ್ಸಿಲಿನ ಅಪ್ಪಣೆ-ಸಲಹೆಗಳಂತೆ ಈ ಸೇನೆಯ ಸಂಘಟನೆಯನ್ನೂ ಆಧಿಪತ್ಯವನ್ನೂ ಆಜಾದ ಹಿಂದ ಸೇನೆಯ ಜನರಲ್ ಆಫೀಸ್ ಕಮಾಂಡಿಂಗನು ನಡೆಯಿಸುವುದು.

೧೦. ಹಿಂದುಸ್ತಾನದಲ್ಲಿಯ ಬ್ರಿಟಿಶ್ ಸತ್ತೆಯ ವಿರುದ್ಧವಾಗಲಿ ಬೇರೆ ಯಾವ ಸತ್ತೆಯ ವಿರುದ್ಧವೇ ಆಗಲಿ ಲಷ್ಕರೀ ಕಾರಸ್ಥಾನವನ್ನು



ಆಜಾದ ಹಿಂದ ಫೌಜಿನ ಪರೇಡು

ನಡೆಯಿಸುವುದಾದರೆ, ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ಸಿನ ಘೋಷಿತ ಅಥವಾ ಗರ್ಭಿತ ಇಚ್ಛೆಗೆ ಅದು ಸುಸಂಗತವಾಗಿದ್ದ ಬಗ್ಗೆ ಯುದ್ಧ ಮಂಡಲವು ಮನವರಿಕೆ ಮಾಡಿಕೊಳ್ಳಬೇಕು.

೧೧. ಆಜಾದ ಹಿಂದ ಆಂದೋಲನದ ಧ್ಯೇಯ-ಅರ್ಥಗಳನ್ನು ಹಿಂದುಸ್ತಾನದಲ್ಲಿಯೂ ವಿಶ್ವದಲ್ಲಿಯೂ ನಾನಾ ರೀತಿಗಳಿಂದ ಅತ್ಯಂತ ಪ್ರಭಾವಶಾಲಿಯಾಗಿ ಪ್ರಚುರಪಡಿಸಬೇಕು.

೧೨. ಈ ಆಂದೋಲನಕ್ಕಾಗಿ ಪೂರ್ವ ಏಶಿಯದ ಭಾರತೀಯರಿಂದ ಹಣವನ್ನು ಕೂಡಿಸುವುದಕ್ಕೆ ಯುದ್ಧ ಮಂಡಲಕ್ಕೆ (ಕೌನ್ಸಿಲ್ ಆಫ್ ಆ್ಯಕ್ಶನ್) ಅಧಿಕಾರ ಕೊಟ್ಟಿದೆ.

## ೪. ಜಪಾನದೊಡನೆ ತಿಕ್ಕಾಟ

ಹಾಂಕಾಂಕ ಪರಿಷತ್ತಿನ ಈ ನಿರ್ಣಯಗಳಿಂದ ಜಪಾನಕ್ಕೆ ಸಮಾಧಾನ ವಾಗಲಿಲ್ಲ. ಹಿಂದೀಯರಿಗೆ ಎಷ್ಟರಮಟ್ಟಿಗೆ ಸಹಾಯ ಮಾಡಬೇಂದು ಅದು ವಿಚಾರದಲ್ಲಿ ಬಿದ್ದಿರಬೇಕು. ಈ ನಿರ್ಣಯಗಳಿಗೆ ಜಪಾನಿಗಳಿಂದ ವಿವರವಾದ ಉತ್ತರವು ಸಿಕ್ಕಲಿಲ್ಲ. ಹಿಂದುಸ್ತಾನಕ್ಕೆ ಸಂಪೂರ್ಣ ಸ್ವಾತಂತ್ರ್ಯ ವನ್ನು ದೊರಕಿಸುವ ಕಾರ್ಯದಲ್ಲಿ ನೆರವಾಗಬೇಕೆಂದು ಜಪಾನರ ನಿರ್ಧಾರ ವುಂಟೆಂದೂ ಹಿಂದುಸ್ತಾನದ ವಿಷಯದಲ್ಲಿ ಪ್ರಾದೇಶಿಕ ಅಥವಾ ಅನ್ಯ ಮಹತ್ವಾಕಾಂಕ್ಷೆ ಅದಕ್ಕಿಲ್ಲವೆಂದೂ ಸಂದಿಗ್ಧವಾದ ಉತ್ತರವು ದೊರೆಯಿತು. ಇದರಿಂದ ಹಿಂದೀ ಯುದ್ಧ ಮಂಡಲಕ್ಕೆ ಸಮಾಧಾನವಾಗಲಿಲ್ಲ. ಸ್ವಾತಂತ್ರ್ಯ ಸಂಘಕ್ಕೂ ಜಪಾನೀ ಸರಕಾರ-ಸೈನ್ಯಾಧಿಕಾರಿಗಳಿಗೂ ಮಧ್ಯಸ್ಥವಾಗಿ ಒಂದು ಮಂಡಲವು ನಿಯಮಿತವಾಗಿತ್ತು. 'ಇವಾಕುರಾ ಕಿಕಾನ ಮಂಡಲ' ಎಂದು ಅದರ ಹೆಸರು. ಅದರ ಅಧಿಕಾರಿಗಳು ಭಾರತೀಯ ಸ್ವಾತಂತ್ರ್ಯ ಸಂಘದ ಆಡಳಿತದಲ್ಲಿಯೂ ಆಜಾದ ಹಿಂದ ಸೇನೆಯ ಕಾರಭಾರದಲ್ಲಿಯೂ ಕೈವಾಡ ನಡೆಯಿಸಿದರು ಅವರ ಈ ಧೋರಣವು ಯುದ್ಧಮಂಡಲಕ್ಕೆ ಸೇರಲಿಲ್ಲ. ಅಲ್ಲದೆ ಆಜಾದ ಹಿಂದ ಸೇನೆ ಭರದಿಂದ ಬೆಳೆಯುವುದಕ್ಕೆ ಸಹಾಯ ಮಾಡಲು ಜಪಾನಿಗಳ ನಿರಿಚ್ಛೆ ಕಂಡುಬರತೊಡಗಿತು.

ಈ ಎಲ್ಲ ಕಾರಣಗಳಿಂದಾಗಿ ಭಾರತೀಯರಲ್ಲಿ ಉಂಟಾದ ಅಸಂತೋಷವು ಪ್ರಬಲವಾಯಿತು. ಎಲ್ಲ ಮಹತ್ವದ ವಿಷಯಗಳ ಬಗ್ಗೆಯೂ

ಅವರು ಜಪಾನ ಸರಕಾರದಿಂದ ಸ್ಪಷ್ಟೀಕರಣವನ್ನು ಕೋರಿದರು. ಅದಿಲ್ಲದೆ ಡಿಸೆಂಬರ್ ೧೯೪೨ರಲ್ಲಿ ಆಜಾದ ಹಿಂದ ಸೇನೆಯನ್ನು ಬ್ರಹ್ಮದೇಶಕ್ಕೆ ಕಳಿಸಲಾಗುವುದಿಲ್ಲವೆಂದು ಯುದ್ಧಮಂಡಲವು ತಿಳಿಸಿತು. ಯುದ್ಧಮಂಡಲದ ಸಲಹೆಯನ್ನೇ ಕೇಳದೆ, ಜಪಾನಿಗಳು ಆಜಾದ ಹಿಂದ ಸೇನೆಯ ಮುಖ್ಯಾಧಿಕಾರಿಯನ್ನು ಬ್ರಿಟಿಶರ ಗುಪ್ತಚಾರನೆಂಬ ಸಂದೇಹದಿಂದ ಸೆರೆಹಿಡಿದರು. ಅದರಿಂದ ಡಿಸೆಂಬರ ೮ನೆಯ ದಿನ ಪರಿಸ್ಥಿತಿ ಮತ್ತಿಷ್ಟು ಹದಗೆಟ್ಟಿತು. ಯುದ್ಧಮಂಡಲದ ನಾಲ್ವರು ಸಭಾಸದರು ರಾಜೀನಾಮೆಯಿತ್ತರು.

ಆಗ ಲೀಗದ ಅಧ್ಯಕ್ಷನು ತಾನೇ ಜಪಾನಕ್ಕೆ ಹೋಗಿ ಅಗತ್ಯವಿದ್ದ ಸ್ಪಷ್ಟೀಕರಣವನ್ನು ಪಡೆದುಕೊಂಡು ಬರುವುದಾಗಿ ಸಾರಿದ. ಆವರೆಗೂ ಲೀಗದ ಕಾರ್ಯವು ನಡೆದಿರಲೆಂದು ಹೇಳಿದ. ಈ ಚಳವಳಿಯ ಎಲ್ಲ ಪ್ರಶ್ನೆಗಳ ಬಗ್ಗೆಯೂ ಜಪಾನೀ ಸರಕಾರದಿಂದ ಘೋಷಣಾ ಪತ್ರಿಕೆ ಮೊದಲಾದವುಗಳ ರೂಪದಲ್ಲಿ ಶಕ್ಯವಿದ್ದಷ್ಟು ಶೀಘ್ರದಲ್ಲಿ ಸ್ಪಷ್ಟೀಕರಣವನ್ನು ದೊರಕಿಸಬೇಕೆಂದೂ ಆ ವರೆಗೆ ಚಳವಳಿಯ ನಿತ್ಯದ ಕಾರ್ಯಗಳನ್ನು ನಡೆಯಿಸಿದ್ದರೂ ಘೋಷಣಾಪತ್ರಿಕೆ ಹೊರಡುವವರೆಗೆ ಮುಂದಡಿಯಿಡ ತಕ್ಕುದಲ್ಲವೆಂದೂ ಮಲಯ ಶಾಖೆ ಕಟ್ಟು ಹಾಕಿತು.

ಇದರಿಂದ ಪರಿಸ್ಥಿತಿ ಕೆಲಮಟ್ಟಿಗೆ ಹದಕ್ಕೆ ಬಂದಂತೆ ತೋರಿತು. ಆ ಹದ ಹೆಚ್ಚು ಕಾಲ ಉಳಿಯಲಿಲ್ಲ, ಮತ್ತೆ ಹಸಗೆಟ್ಟಿತು. 'ಇವಾಕುರಾ ಕಿಕಾನ'ವು ಭಾರತೀಯ ಸ್ವಾತಂತ್ರ್ಯ ಸಂಘದ ಬಲವನ್ನು ಕುಗ್ಗಿಸುವುದಕ್ಕೆ ಸಂಚು ಮಾಡಿತು. ಗುಪ್ತವಾಗಿ ಯುವಕ ಸಂಘಟನೆಯನ್ನು ಆರಂಭಿಸಿತು. ಸ್ವಾತಂತ್ರ್ಯ ಸಂಘದ ನಾಯಕರ ವಿರುದ್ಧವಾಗಿ ಅಪಪ್ರಚಾರವನ್ನು ಕೈಕೊಂಡಿತು. ಈ ಪರಿಸ್ಥಿತಿಯ ಬಗ್ಗೆ ಸ್ವಾತಂತ್ರ್ಯ ಸಂಘದ ಮಲಯ ಶಾಖೆ ೧೯೪೩ನೆಯ ಫೆಬ್ರುವರಿಯಲ್ಲಿ ಮೂರು ದಿನ ಪರ್ಯಾಲೋಚಿಸಿತು. ಸದ್ಯದ ಪರಿಸ್ಥಿತಿಯ ವಿಷಯವಾಗಿ ಸಂಘದ ಅಧ್ಯಕ್ಷರಿಗೆ ಒಂದು ಮೆಮೊರಂಡಮ್ ಕೊಡಬೇಕೆಂದು ಅಲ್ಲಿ ತೀರ್ಮಾನವಾಯಿತು. ಗರಿಸ್ಥಿತಿ ಬೇಗನೆ ಹದಕ್ಕೆ ಬರದಿದ್ದರೆ ರಾಜೀನಾಮೆ ಕೊಡಬೇಕೆಂದೂ ಈ ಸಭೆ ನಿರ್ಣಯಿಸಿತು.

ಆದರೆ ಈ ಮೆಮೊರಂಡಮ್ ಅಧ್ಯಕ್ಷನಿಗೆ ತಲುಪುವುದಕ್ಕಿಂತ ಮುಂಚೆಯೇ ಜಪಾನಿಗಳಿಗೆ ಅದರ ಸುಳಿವು ಹತ್ತಿತು. ಈ ರಾಜೀನಾಮೆಯ

ಸೂಚನೆ ಅವರಿಗೆ ಬೇಕಾದುದೇ ಆಗಿತ್ತು. ಮಹತ್ವದ ಅಧಿಕಾರಸ್ಥಳಗಳಿಗೆ ತಮಗನುಕೂಲರಾದ ಜನರನ್ನು ಏರಿಸುವುದಕ್ಕೆ ಹೀಗಾಗುವುದು ಒಳಿತೆಂದು ಅವರು ಬಗೆದರು. ರಾಜೀನಾಮೆ ಕೊಡುವ ಬಗ್ಗೆ ಹಟ ಹಿಡಿಯುವಂತೆ ಮಲಯ ಶಾಖೆಯ ಅಧ್ಯಕ್ಷನಿಗೆ ಒತ್ತಾಯ ಪಡಿಸಲಾಯಿತು. ಆದರೆ ಸಂಘವನ್ನು ತಮ್ಮ ಕೈಗೊಂಬೆಯಾಗಿ ಮಾಡಿಕೊಳ್ಳಲು ಜಪಾನಿಗಳು ಹೊಂಚು ಹಾಕಿದ್ದಾರೆಂಬುದು ಭಾರತೀಯ ಪ್ರಮುಖರಿಗೆ ತೀವ್ರವೇ ತಿಳಿಯಿತು. ಹೀಗಾಗುವವುದು ಅವರಿಗೆ ಬೇಡವಾಗಿತ್ತು. ಅವರು ತಮ್ಮ ಅಧಿಕಾರ ಪದಗಳನ್ನು ಬಿಡಕೂಡದೆಂದು ನಿರ್ಧರಿಸಿದರು.

ಮುಂದೆ ೧೯೪೩ನೆಯ ಏಪ್ರಿಲ್ ತಿಂಗಳಲ್ಲಿ ಪೂರ್ವ ಏಶಿಯದ ಎಲ್ಲ ಪ್ರದೇಶಗಳ ಪ್ರತಿನಿಧಿಗಳ ಪರಿಷತ್ತು ಸಿಂಗಾಪುರದಲ್ಲಿ ಸೇರಿತು. ಅದರಲ್ಲಿ ಅಧ್ಯಕ್ಷನು ತಮ್ಮ ಬದಲು ಇನ್ನು ಸುಭಾಸಚಂದ್ರ ಬೋಸರು ಚಳವಳಿಯ ನೇತೃತ್ವವನ್ನು ಸ್ವೀಕರಿಸಲಿದ್ದಾರೆಂದು ಸಾರಿದ.

## ೫. ನೇತಾಜಿ ಸುಭಾಸ

ಸುಭಾಸಚಂದ್ರ ಬೋಸ ಯುರೋಪಿನಿಂದ ಜರ್ಮನ್ ಜಲಾಂತರ್ಗಾಮಿಯಿಂದ ಜಪಾನಿನ ರಾಜಧಾನಿ ಟೋಕಿಯೋಕ್ಕೆ ಬಂದ. ಯುರೋಪಿನಲ್ಲಿದ್ದಾಗ ಅಲ್ಲಿಯ ಎಲ್ಲ ರಣಕ್ಷೇತ್ರಗಳಿಗೂ ಹೋಗಿ ಯುದ್ಧವನ್ನು ನೋಡಿದ್ದ. ಅಲ್ಲಿದ್ದ ಹಿಂದೀಯರ ಸಣ್ಣದೊಂದು ಆಜಾದ ಸೇನೆಯನ್ನೂ ರಚಿಸಿದ್ದ. ಬರುವಾಗ ಆ ಮಿತ್ರರನ್ನು ಕರೆದುಕೊಂಡು ಬಂದ. ಹಸನ ಎಂಬ ತರುಣ ಭಾರತೀಯನು ಸಂಗಡ ಇದ್ದ. ಜಪಾನಿಗಳು ಸುಭಾಸ ಬಾಬುವನ್ನು ವಿಶೇಷ ಗೌರವದಿಂದ ಸನ್ಮಾನಿಸಿದರು. ಆತನ ವ್ಯಕ್ತಿತ್ವವು ಜಪಾನಿಗಳನ್ನು ಆಕರ್ಷಿಸಿತು. ಜಪಾನದಲ್ಲಿ ಸುಭಾಸ ಉಚ್ಚ ಸೈನ್ಯ ಶಿಕ್ಷಣ ಹೊಂದಿ ಪದವಿಗಳನ್ನು ಪಡೆದ.

೧೯೪೩ನೆಯ ಜುಲೈ ೨. ಸುಭಾಸಚಂದ್ರ ಬೋಸ ಸಿಂಗಾಪುರಕ್ಕೆ ಬಂದ. ೪ನೆಯ ತಾರೀಖಿನ ದಿನ ಪ್ರತಿನಿಧಿಗಳ ಸಭೆ ಕೂಡಿತು. ಮೊದಲಿನ ಅಧ್ಯಕ್ಷನು ರಾಜೀನಾಮೆ ಕೊಟ್ಟ. ಸುಭಾಸಬಾಬು ನೇತಾಜಿಯಾದ. ಆಜಾದ ಹಿಂದ ಸೇನೆ ಸಹಿತವಾಗಿ ಎಲ್ಲವನ್ನೂ ಪುನರ್ಘಟಿಸಲಾಯಿತು. ೫ನೆಯ ತಾರೀಖಿನ ದಿನ ಆಜಾದ ಹಿಂದ ಸೇನೆಯ ಪರೇಡಾಯಿತು. ಆಗ

'ಆಜಾದ ಹಿಂದ ಸೇನೆಯನ್ನು ಕಟ್ಟಲಾಗಿದೆ' ಯೆಂದು ಜಗತ್ತಿಗೆ ಸಾರಿ ಹೇಳಲಾಯಿತು.

ಸುಭಾಸ ಬಾಬು ಬರುವ ಮೊದಲು ಹಿಂದೀ ಸ್ವಾತಂತ್ರ್ಯ ಸಂಘವನ್ನು ತಮ್ಮ ಪಂಚಮದಳದಂತೆ ಉಪಯೋಗಿಸಿಕೊಳ್ಳಲು ಜಪಾನಿಗಳು ಪ್ರಯತ್ನಿಸುತ್ತಲಿದ್ದರು. ಆದರದು ಸರಿಯಾಗಿ ಅವರಿಗೆ ವಶವಾಗಲಿಲ್ಲ. ಅಲ್ಲದೆ ಕಟ್ಟಿದ ಆಜಾದ ಹಿಂದ ಸೇನೆಯೂ ಬಹುಮಟ್ಟಿಗೆ ವಿಸರ್ಜಿತವಾದಂತಾಗಿತ್ತು. ಸುಭಾಸ ಬಾಬು ನೇತಾಜಿಯಾದೊಡನೆ ಪರಿಸ್ಥಿತಿಯೇ ಬದಲಾಯಿತು. ಭಾರತೀಯ ಸ್ವಾತಂತ್ರ್ಯ ಚಳವಳಿಗೆ ಒಳ್ಳೇ ಪ್ರಭಾವಶಾಲಿಯಾದ ಗಟ್ಟಿಮುಟ್ಟಿಯಾದ ಹಿರಿಹುದ್ದರಿ ಸಿಕ್ಕಂತಾಯಿತು. ಆಂದೋಲನವು ತೀವ್ರಗತಿಯಿಂದ ಹೆಚ್ಚಾಳ ಪಡೆಯಿತು.

ನೇತಾಜಿಯ ನೇತೃತ್ವದಿಂದ ಹಿಂದೀಯರ ದೇಶಾಭಿಮಾನವು ಪ್ರಜ್ವಲಿತವಾಯಿತು. ಅವರ ಉತ್ಸಾಹವು ದ್ವಿಗುಣಿತವಾಯಿತು. ಅವರಲ್ಲಿ ವೀರವೃತ್ತಿಯ ವಿದ್ಯುತ್ಸಂಚಾರವಾಯಿತು. ಸ್ವಾತಂತ್ರ್ಯ ಸಂಘದ ಸದಸ್ಯಸಂಖ್ಯೆಯೂ ಆಜಾದ ಹಿಂದ ಸೇನೆಯ ಸೈನಿಕ ಸಂಖ್ಯೆಯೂ ಅದ್ಭುತವಾಗಿ ಹೆಚ್ಚಿತು. ಸ್ವತಂತ್ರ ಭಾರತ ಸಂಘದ ಎಪ್ಪತ್ತು ಶಾಖೆಗಳು ಮಲಯದಲ್ಲಿದ್ದವು; ಸದಸ್ಯರ ಸಂಖ್ಯೆ ೨೦೦೦೦೦ಕ್ಕೆ ಮಿಕ್ಕಿತ್ತು. ಬ್ರಹ್ಮದೇಶದಲ್ಲಿದ್ದ ಕಾರ್ಯಶೀಲ ಶಾಖೆಗಳು ನೂರಕ್ಕೆ ಹೆಚ್ಚು; ವಿಮಾನದಾಳಿ ಸತತವಾಗಿ ಆಗುತ್ತಿದ್ದುದರಿಂದ ಇವುಗಳ ಕಾರ್ಯದಲ್ಲಿ ಬಹಳ ತೊಂದರೆಯಾಗುತ್ತಿತ್ತು. ಥಾಯಲಂಡದಲ್ಲಿ ಇಪ್ಪತ್ತುನಾಲ್ಕು ಶಾಖೆಗಳಿದ್ದವಲ್ಲದೆ, ಜಾವಾ, ಸುಮಾತ್ರಾ, ಅಂದಮಾನ, ಸೆಲೆಬಿಸ್, ಬೋರ್ನಿಯೋ, ಫಿಲಿಫಾಯಿನ್ಸ್, ಚೀನ, ಮಂಚುಕೋ, ಜಪಾನಗಳಲ್ಲಿಯೂ ಶಾಖೆಗಳಿದ್ದವು ರಂಗೂನದ ಸಭೆಯೊಂದರಲ್ಲಿ ರಕ್ತಾರ್ಪಣ ಪ್ರತಿಜ್ಞೆಗೆ ತಮ್ಮ ತಮ್ಮ ರಕ್ತದಿಂದಲೇ ಅಂಕಿತಹಾಕುವುದಕ್ಕೆ ಸ್ತ್ರೀಪುರುಷರೆಲ್ಲರೂ ಮುಗಿಬಿದ್ದ ದೃಶ್ಯವು ಅತ್ಯಂತ ರೋಮಾಂಚಕಾರಿಯಾಗಿದೆ.

ರಂಗೂನಿನ ಸುಪ್ರಸಿದ್ಧ ಜುಬಿಲಿ ಹಾಲಿನಲ್ಲಿ ಸಭೆ. ಸಾವಿರಾರು ಸ್ತ್ರೀಪುರುಷರೂ ಬಾಲಕ-ಬಾಲಿಕೆಯರೂ ಕೂಡಿದ್ದಾರೆ. ಭಾಷಣವನ್ನು ಕೇಳುವುದರಲ್ಲಿ ಎಲ್ಲರೂ ತನ್ಮಯರು. ಭಾಷಣಕಾರನು ( ನೇತಾಜಿ? ) ಹೇಳುತ್ತಿದ್ದ—

"ನನಗೀಗ ಅಂಗೈಯಲ್ಲಿ ಶಿರಸ್ಸನ್ನು ಹಿಡಿದುಕೊಂಡು ದೇಹಾರ್ಪಣಾ ಮಾಡುವ ಜನ ಬೇಕಾಗಿದ್ದಾರೆ. ನನಗೆ ಬೇಕು—ರಕ್ತಧಾರೆ ಸುರಿಸುವ ವೀರರು, ವೀರಾಂಗನೆಯರು. 'ನೀವು ನನಗೆ ನೆತ್ತರು ಕೊಡಿ' ನಾನು ನಿಮಗೆ ಸ್ವಾತಂತ್ರ್ಯ ಕೊಡುವೆ."

ಶ್ರೋತೃಗಳ ಅಂತಃಕರಣ ಉಬ್ಬತೊಡಗಿತು. 'ನಾನು ಕೊಡುತ್ತೇನೆ, ನಾನು ಕೊಡುತ್ತೇನೆ' ಎಂಬ ಗರ್ಜನೆಯಿಂದ ವಾತಾವರಣವು ಕಲ್ಲೋಲವಾಯಿತು.

ಭಾಷಣಕಾರನೆಂದ: "ಕೇಳಿ! ಬರೀ ಕೈಯೆತ್ತುವುದು ನನಗೆ ಬೇಕಾಗಿಲ್ಲ, ಬರೀ ಹೆಸರುಗಳನ್ನು ಬರೆದುಕೊಳ್ಳುವುದು ಬೇಕಾಗಿಲ್ಲ. ಆತ್ಮಾರ್ಪಣೆಯ ಪ್ರತಿಜ್ಞಾಪತ್ರಕ್ಕೆ ನಿಮ್ಮ ಅಂಕಿತ ಬೇಕು!"

'ನಾವು ಅಂಕಿತ ಹಾಕುತ್ತೇವೆ, ನಾವು ಅಂಕಿತ ಹಾಕುತ್ತೇವೆ'—ಸಭೆಯಲ್ಲಿ ಪುನಃ ಘೋಷಣೆ.

"ಹಾಂ! ಅಂಕಿತ ಮಸಿಯದಲ್ಲ. ರಕ್ತಾರ್ಪಣೆಯ ಪ್ರತಿಜ್ಞೆಗೆ ರುಜು ರಕ್ತದ್ದೇ ಆಗಬೇಕು. ಪ್ರತಿಜ್ಞೆ ಮಾಡಲು ಇಷ್ಟಪಡುವವರು ಮುಂದೆ ಬನ್ನಿ, ಈ ವ್ಯಾಸಪೀಠದ ಮೇಲೆ ನಿಮ್ಮ ರಕ್ತವನ್ನು ನಿಮ್ಮ ಕೈಯಿಂದಲೇ ಕೆಡವಿ ಅದರಲ್ಲಿ ಲೆಕ್ಕಣಿಕೆಯನ್ನದ್ದಿ ರುಜು ಮಾಡಿರಿ!"

ಎಂದು ಹೇಳಿ ಭಾಷಕಾರ ಸುಮ್ಮನೆ ನಿಂತ. 'ನನ್ನ ರಕ್ತ ತಕ್ಕೊಳ್ಳಿ, ನನ್ನ ರಕ್ತ ತಕ್ಕೊಳ್ಳಿ' ಎಂದು ಶ್ರೋತೃಗಳು ವ್ಯಾಸಪೀಠದ ಕಡೆ ನುಗ್ಗಿದರು. ಸಭೆಯ ವ್ಯವಸ್ಥೆಯನ್ನು ಕಾಯುವುದೇ ಕಠಿನವಾಯಿತು. ಎಲ್ಲರಿಗಿಂತ ಮುಂದೆ ವ್ಯಾಸಪೀಠವನ್ನು ಏರಿಹೋದವರು ಹದಿನೇಳು ಜನ ಕನ್ನಿಕೆಯರು. ಅವರು ಚಾಕು ಚೂರಿಗಳಿಂದ ಕೈಯಾರೆ ಗಾಯ ಮಾಡಿಕೊಂಡು ನೆತ್ತರವನ್ನು ಕೆಡವಿದರು. ತುಂಬಿದ ಸಭೆಯೆದುರಿನಲ್ಲಿ ರಕ್ತಾಕ್ಷರದ ರುಜು ಮಾಡಿದರು. ಸರಿ. ಪುರುಷರ ಉತ್ಸಾಹವನ್ನು ಬಣ್ಣಿಸುವುದಕ್ಕೆ ಸ್ಥಳವೇ ಸಾಲದು, ಶಬ್ದಗಳೂ ಇಲ್ಲ.

'ಝಾಂಸೀ ರಾಣಿ ಪಥಕ' ವನ್ನು ರಚಿಸುವುದಾಗಿ ಅಧ್ಯಕ್ಷ ಸಾರಿದ. ಅದರಲ್ಲಿ ಮತ್ತು ರೆಡ್ ಕ್ರಾಸ್ ವಿಭಾಗದಲ್ಲಿ ಸೇರುವುದಕ್ಕೆ ಅಸಂಖ್ಯ ಸ್ತ್ರೀಯರು ಧಾವಿಸಿ ಬಂದರು. ೧೯೪೩ನೆಯ ಅಕ್ಟೋಬರದಲ್ಲಿ

ಅವರ ಶಿಕ್ಷಣಕ್ಕಾಗಿ ಸಿಂಗಾಪುರದಲ್ಲಿ ಒಂದು ಶಿಬಿರವನ್ನು ತೆರೆಯಲಾಯಿತು. ಮುಂದೆ ರಂಗೂನದಲ್ಲಿಯೂ ಒಂದು ಶಿಕ್ಷಣ ಶಿಬಿರವೇರ್ಪಟ್ಟಿತು.

## ೬. ನೇತಾಜಿಯ ರಣಕಹಳೆ

ಆಜಾದ ಹಿಂದ ಆಂದೋಲನದ ನೇತೃತ್ವವನ್ನು ಸ್ವೀಕರಿಸಿದ ಬಳಿಕ, ಸಿಂಗಾಪುರದೊಂದು ಸಭೆಯಲ್ಲಿ ತಾ॥ ೯-೭-೧೯೪೩ ರಂದು ಸುಭಾಸ ಬಾಬು ಭಾಷಣವಿತ್ತ. ಬ್ರಿಟಿಶರನ್ನು ಭಾರತದಿಂದ ಹೊರದೂಡಲು ಹೊರಗಿನಿಂದ ದಾಳಿಯಿಡುವುದಕ್ಕಾಗಿಯೇ ತಾನು ಸ್ವದೇಶದಿಂದ ಹೊರಬಿದ್ದೆನೆಂದೂ ಅದಕ್ಕೀಗ ಒಳ್ಳೆಯ ಸಮಯ ಒದಗಿದೆಯೆಂದೂ ಅಚ್ಚಿನ ರಾಷ್ಟ್ರಗಳು ತಮಗೆ ಮಿತ್ರರಾಗಿರುವರೆಂದೂ ಅವರ ಸಹಾಯವನ್ನು ಪಡೆಯುವುದರಲ್ಲಿ ತಪ್ಪಿಲ್ಲವೆಂದೂ ಆತ ವಿವರಿಸಿದ. ಆ ಭಾಷಣವೀಗ ಭಾರತದ ಪತ್ರಿಕೆಗಳಲ್ಲಿ ಪ್ರಚುರಗೊಂಡಿದೆ. ಅದನ್ನು ಸಾಧ್ಯವಿದ್ದಮಟ್ಟಿಗೆ ಕಿರಿದಾಗಿಸಿ ಇಲ್ಲಿ ಕೊಟ್ಟಿದೆ—

"ಸೋದರಿಯರೇ, ಸೋದರರೇ, ನೀವಿತ್ತ ಅಮಿತ ಪ್ರೇಮದ ಅತ್ಯುತ್ಸಾಹದ ಸ್ವಾಗತಕ್ಕಾಗಿ ಅಭಿನಂದನೆ. ದೇಶಾಭಿಮಾನವನ್ನು ಪ್ರದರ್ಶಿಸಲು ಇಷ್ಟೊಂದು ಅಧಿಕ ಸಂಖ್ಯೆಯಿಂದ ಕೂಡಿದ ಸೋದರಿಯರಿಗಂತೂ ವಿಶೇಷ ಧನ್ಯವಾದ. ಮುಂದಿನ ಹೋರಾಟದಲ್ಲಿ ಸ್ಯೋನಾನ್-ಮಲಯಗಳಲ್ಲಿರುವ ನನ್ನ ದೇಶಬಾಂಧವರು ಅಗ್ರಭಾಗ ವಹಿಸುವರೆಂದು ನಂಬುಗೆ ಹುಟ್ಟಿಸಿದೆ ಇಂದಿನ ನೋಟ. ಒಂದು ಕಾಲದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಕೋಟೆಯಾಗಿದ್ದುದು ಭಾರತ ರಾಷ್ಟ್ರೀಯತೆಯ ಚಕ್ರವ್ಯೂಹವಾಗಿದೆ ಇಂದು.

"ನಾನಿಲ್ಲಿಗೇಕೆ ಬಂದೆ? ಮನೆ-ನಾಡುಗಳನ್ನು ಬಿಟ್ಟು ಈ ಅಪಾಯಮಯ ಪ್ರಯಾಣವನ್ನು ಕೈಕೊಳ್ಳುವಂತೆ ನನ್ನನ್ನು ಹುರಿದುಂಬಿಸಿದುದಾವುದು? ಭಾರತದೊಳಗಡೆಯಿಂದ ಎಷ್ಟು ಪ್ರಯತ್ನಿಸಿದರೂ ಬ್ರಿಟಿಶರನ್ನು ಹೊರದೂಡುವುದು ಸಾಧ್ಯವಿಲ್ಲವೆಂದೇ ಅನುಭವಗಳಿಂದ ನಾನೊಂದು ನಿರ್ಧಾರಕ್ಕೆ ಬಂದಿದ್ದೇನೆ. ಒಳ-ಹೋರಾಟವೊಂದೇ ಸಾಕಾಗುತ್ತಿದ್ದರೆ, ಅನಗತ್ಯವಾಗಿ ಇಂತಹ ಅಪಾಯ-ಗಂಡಾಂತರಗಳನ್ನು ಶಿರಸಾ ವಹಿಸಿಕೊಳ್ಳಲು ನಾನೇನು ತಲೆತಿರುಕನಲ್ಲ. ಒಳಗಿನ ಹೋರಾಟವನ್ನು ಹೊರಗಡೆಯಿಂದ ಸಮರ್ಥಿಸಲು ನಾನು ಹಿಂದುಸ್ತಾನವನ್ನು ಬಿಟ್ಟು ಬಂದೆ. ಈ

ಬಾಹ್ಯ ಸಹಾಯ ಸಂಗಮವಿಲ್ಲದೆ ಹಿಂದುಸ್ತಾನದ ಸ್ವಾತಂತ್ರ್ಯ ಯಾರೊಬ್ಬ ರಿಂದಲೂ ಆಗದು.

“ಅಲ್ಲದೆ, ಒಳ-ಹೋರಾಟಕ್ಕೀಗ ಅತ್ಯಗತ್ಯವಾಗಿ ಬೇಕಾಗಿರುವ ಹೊರಗಿನ ನೆರವು ವಸ್ತುತಃ ಅತ್ಯಲ್ಪ. ಏಕೆಂದರೆ ಬ್ರಿಟಿಶರಿಗಾಗಿರುವ ಸೋಲಿನಿಂದಾಗಿ ಅವರ ಶಕ್ತಿ-ವರ್ಚಸ್ಸು ಮಣ್ಣು ಮುಕ್ಕಿರುವುದರಿಂದ, ನಮ್ಮ ಕೆಲಸ ಬಲು ಸುಲಭವಾಗಿದೆ. ಸ್ವದೇಶದಲ್ಲಿರುವ ನಮ್ಮ ಬಾಂಧವರಿಗೆ ಈಗ ನೈತಿಕ ಬೆಂಬಲದ ಹಾಗೂ ಕಾರ್ಯಕಾರೀ ಸಹಾಯದ ಪರಮಾವಧಿ ಅಗತ್ಯವಿದೆ. ನಾನು ಹೊರಗಿದ್ದುಕೊಂಡು ಎಲ್ಲವನ್ನೂ ಪ್ರತ್ಯಕ್ಷವಾಗಿ ಪರಾಮರ್ಶಿಸಿದ್ದೇನೆ; ಯುದ್ಧನಿರತ ರಾಷ್ಟ್ರಗಳ ಸ್ಥಿತಿಗತಿಗಳನ್ನು ಅಭ್ಯಾಸಿಸಿ ಅರಿತಿದ್ದೇನೆ; ಅದರಿಂದ ಆಂಗ್ಲೊ-ಅಮೇರಿಕನ್ ಸಾಮ್ರಾಜ್ಯವಾದದ ಅಂತ್ಯ ಸಮೀಪಿಸಿದೆಯೆಂದು ನಿರ್ಧರಿಸಿದ್ದೇನೆ. ಇಡೀ ಪ್ರಪಂಚದಲ್ಲಿರುವ ನಮ್ಮ ದೇಶ-ಬಾಂಧವರೀಗ ಎಚ್ಚೆತ್ತು ರಾಷ್ಟ್ರೀಯ ಹೋರಾಟದಲ್ಲಿ ಪಾಲುಗೊಳ್ಳಲು ಆತುರರಾಗಿರುವುದನ್ನು ತಿಳಿದು ನನಗೆ ಅತ್ಯಾನಂದವಾಗಿದೆ. ಸ್ವತಂತ್ರ ಭಾರತವನ್ನು ಕಾಣುವ ಯಥಾರ್ಥ ಬಯಕೆ ಅಚ್ಚಿನ ರಾಷ್ಟ್ರಗಳಿಗೂ ಇದೆಯೆಂಬುದನ್ನೂ ನಾವು ಬಯಸಿದರ ತಮ್ಮಿಂದಾಗುವ ಸಹಾಯವನ್ನು ಸಲ್ಲಿಸಲು ಅವು ಸಿದ್ಧವಿದೆ ಎಂಬುದನ್ನೂ ತಿಳಿದು ಆ ಬಗ್ಗೆಯೂ ಕೃತಜ್ಞನಾಗಿದ್ದೇನೆ.

“ಅಚ್ಚಿನ ರಾಷ್ಟ್ರಗಳ ಧೋರಣೆಯ ಬಗ್ಗೆ ಯಾರಿಗಾದರೂ ರವಷ್ಟು ಸಂದೇಹವಿದೆಯಾದರೆ, ಇಡೀ ಪ್ರಪಂಚದಲ್ಲಿ ನಮ್ಮ ದೇಶ-ಬಾಂಧವರ ತರುವಾಯ ನಮಗಿರುವ ಆಪ್ತ-ಮಿತ್ರರೆಂದರೆ ಅವರೇ ಎಂಬುದನ್ನು ಬೇಕಾದಷ್ಟು ರುಜುವಾತುಗಳಿಂದ ನಾನು ಮುಂದಟ್ಟು ಮಾಡಿಕೊಡಬಲ್ಲೆ. ನಾನು ಕೇಳಿಕೊಳ್ಳುತ್ತೇನೆ—ನನ್ನ ಮಾತಿನಲ್ಲಿ ನಂಬುಗೆಯಿಡಿರಿ. ಸ್ವದೇಶ ಹಿತಕ್ಕೆ ದ್ರೋಹ ಬಗೆಯುವ ಮನುಷ್ಯ ನಾನೆಂದು ಹೇಳುವ ಎದೆ ನನ್ನ ವೈರಿಗೂ ಇರಲಾರದು. ನನ್ನ ನೀತಿಭಂಗ ಮಾಡಲು, ನನ್ನನ್ನು ಮೋಸಗೊಳಿಸಲು ಬ್ರಿಟಿಶ್ ಸರಕಾರದಿಂದಲೇ ಆಗದಿರುವಾಗ, ಪ್ರಪಂಚದ ಮತ್ತೊಂದು ಶಕ್ತಿಯಿಂದ ಅದೆಂದಿಗೂ ಆಗದು. ಆದುದರಿಂದ ಬ್ರಿಟಿಶ್ ಸಾಮ್ರಾಜ್ಯವನ್ನು ಪ್ರತಿಭಟಿಸುವಲ್ಲಿ ನಿಮಗೆ ಬೇಕಾಗಿದ್ದರೆ ಅಚ್ಚಿನ ರಾಷ್ಟ್ರ

ಗಳು ನಮ್ಮ ಬೆಂಬಲಕ್ಕಿವೆ ಎಂಬ ನನ್ನ ಮಾತನ್ನು ನಂಬಿರಿ. ಆದರೆ ಹೆರವರ ನೆರವು ಬೇಕು ಅಥವಾ ಬೇಡವೆಂಬುದನ್ನು ನಿರ್ಣಯಿಸತಕ್ಕವರು ನೀವೇ. ಯಾರ ಸಹಾಯವೂ ಇಲ್ಲದೆ ನೀವದನ್ನು ಸಾಧಿಸುವುದಾದರೆ ಉತ್ತಮವೇ. ಹೀಗೆನ್ನುವಾಗ ನಾನು ಮತ್ತೊಂದು ಮಾತನ್ನು ಹೇಳಬೇಕಾಗಿದೆ. ಆ ಸರ್ವತ್ರಾಣಿ ಬ್ರಿಟಿಶ್ ಸರಕಾರವು ದೀನ ಪ್ರಾಣಿಯಂತೆ ಸಹಾಯ ಭಿಕ್ಷೆಬೇಡುತ್ತ, ಪ್ರಪಂಚದ ಮೂಲೆ ಮೂಲೆ ಸುತ್ತುತ್ತ—ದಾಸ್ಯಬದ್ಧ, ಬರಗಾಲ ಪೀಡಿತ ಭಾರತೀಯರೆದುರೂ ಅಂಗಲಾಚುತ್ತ ಇರುವಾಗ—ಅನಿವಾರ್ಯ ಆವಶ್ಯಕತೆ ಒದಗಿದರೆ ನಾವು ಪರಕೀಯರ ಸಹಾಯ ಪಡೆದರೆ ಏನೂ ತಪ್ಪಲ್ಲ.

"ಹೊರವಲಯಗಳ, ಮುಖ್ಯವಾಗಿ ಪೂರ್ವ ಏಶಿಯಾದ ಭಾರತೀಯರು ಹೋರಾಟದ ಸೇನೆಯೊಂದನ್ನು ಕಟ್ಟುವುದರಲ್ಲಿದ್ದಾರೆ. ಹಿಂದುಸ್ತಾನದಲ್ಲಿರುವ ಬ್ರಿಟಿಶ್ ಸೇನೆಯ ಮೇಲೆ ದಾಳಿ ನಡೆಸುವಷ್ಟು ಸಶಕ್ತ ಸೇನೆಯದು. ನಾವದನ್ನು ಸಾಧಿಸುವುದೇ ತಡ, ಸ್ವದೇಶದಲ್ಲಿರುವ ನಾಗರಿಕರು ಕ್ರಾಂತಿಯ ಬಂಡಾಯವೆಬ್ಬಿಸುವರು. ಇಷ್ಟೇ ಅಲ್ಲ, ಬ್ರಿಟಿಶ್ ಧ್ವಜದಡಿಯಲ್ಲಿ ನಿಂತಿರುವ ಹಿಂದೀ ಸೇನೆಯಲ್ಲಿಯೂ ಕ್ರಾಂತಿಯೇಳುವುದು. ಇಕ್ಕಡೆಗಳಿಂದ ದಾಳಿ ನಡೆದರೆ ಬ್ರಿಟಿಶ್ ಸರಕಾರ ಧ್ವಂಸವಾಗುವುದೇ ಸರಿ. ಈ ನನ್ನ ಯೋಜನೆಗನುಸಾರವಾಗಿ ಹಿಂದುಸ್ತಾನದ ಬಗ್ಗೆ ಅಚ್ಜಿನ ರಾಷ್ಟ್ರಗಳ ಧೋರಣೆಯೇನೆಂಬುದರ ಗೊಡವೆಯೇ ನಮಗೆ ಬೇಕಿಲ್ಲ. ಹಿಂದುಸ್ತಾನದೊಳಗಿನ ಮತ್ತು ಹೊರಗಿನ ಭಾರತೀಯರು ತಮ್ಮ ಕರ್ತವ್ಯವನ್ನು ಮಾಡಿದಲ್ಲಿ ೩೮ ಕೋಟಿ ೮೦ ಲಕ್ಷ ದೇಶಬಾಂಧವರನ್ನು ಸ್ವತಂತ್ರಗೊಳಿಸುವುದು ಭಾರತೀಯರಿಗೇ ಸಾಧ್ಯ.

"ದೇಶದೊಳಗಿರುವ ೩೮ ಕೋಟಿ ೮೦ ಲಕ್ಷ ಜನರಿಂದಾಗಲಿಲ್ಲವಂತೆ, ಹೊರಗೆ ವಾಸಿಸುವ ೩೦ ಲಕ್ಷ ಜನರಿಂದ ಆಗುವುದಾದರೂ ಹೇಗೆ ಎಂದು ಕೆಲವರು ಕೇಳಿಯಾರು. ಆದರೆ ಮಿತ್ರರೇ, ಐಯರ್ಲಂಡಿನ ಚರಿತ್ರೆಯ ಕಡೆ ಕಣ್ಣು ಬಿಡಿರಿ. ಬ್ರಿಟಿಶ್ ಅಧಿಕಾರದಡಿಯಲ್ಲಿ, ಮಾರ್ಶಲ್ ಲಾದ ಅಂಕೆಯಲ್ಲಿ, ೩೦ ಲಕ್ಷ ಐರಿಶರು ತಮ್ಮ ಐದೇ ಸಾವಿರ ಸಿನ್ ಫೀನ್ ಸಶಸ್ತ್ರ ಸ್ವಯಂಸೇವಕರ ಸಹಾಯದಿಂದ ಬ್ರಿಟಿಶ್ ಸರಕಾರವನ್ನು ಡೊಗ್ಗಾಲೂರಿ

ದರು. ಎಂದ ಬಳಿಕ ೩೦ ಲಕ್ಷ ಭಾರತೀಯರಿಗೆ ಸ್ವದೇಶದಲ್ಲಿಯ ಸಶಕ್ತ
ಳವಳಿಯೊಂದು ಸಹಾಯಕವಾದಲ್ಲಿ ಬ್ರಿಟಿಶರನ್ನು ಭಾರತದಿಂದ ಹೊರ
ಬ್ಬುವ ಆಸೆಯಿರಬಾರದೇಕೆ ?

"ಮಿತ್ರರೇ, ಪೂರ್ವ ಏಶಿಯದ ೩೦ ಲಕ್ಷ ಭಾರತೀಯರು ತಮ್ಮ
ರ್ವಸ್ವದೊಡನೆ ಸಿದ್ಧರಾಗಬೇಕಾದ ಕಾಲ ಬಂದಿದೆ. ಅರೆಮನಸಿನ
ಯತ್ನಗಳಿಂದ ಫಲವಿಲ್ಲ. ನನಗೆ ಬೇಕಾದುದು ಸರ್ವಾಂಗ ಸಿದ್ಧತೆ.
ದು ಸರ್ವಾಂಗ ಸಮರವೆಂಬುದನ್ನು ಬಾರಿಬಾರಿಗೂ--ನಮ್ಮ ವೈರಿಗಳ
ಾಯಿಂದ ಕೂಡ—ಕೇಳುತ್ತಿದ್ದೇವೆ. ಮಿತ್ರರೇ, ಯುರೋಪಿನ ದ್ವಿತೀಯ
ಣರಂಗದ ಸುದ್ದಿ ದೀರ್ಘ ಕಾಲದಿಂದಲೂ ಕೇಳಿಬರುತ್ತಲಿದೆ. ಆದರೆ
ೋಡಿರಿ, ಸ್ವದೇಶದಲ್ಲಿರುವ ನಮ್ಮ ದೇಶಬಾಂಧವರು ಅಸಹನೀಯ
ತ್ತಡಕ್ಕೊಳಗಾಗಿ ದ್ವಿತೀಯರಂಗ ತೆರೆಯಬೇಕೆಂದು ಬೇಡುತ್ತಿದ್ದಾರೆ.
ೂರ್ವ ಏಶಿಯದ ಸಾರ್ವತ್ರಿಕ ಸಿದ್ಧತೆಯನ್ನು ನನಗೆ ಕೊಡಿರಿ; ದ್ವಿತೀಯ
ಂಗದ ಭಾರತ ಸಂಗ್ರಾಮದ ನಿಜವಾದ ದ್ವಿತೀಯರಂಗದ—ವಾಗ್ದಾನ
ನ್ನು ತಕ್ಕೊಳ್ಳಿ ನನ್ನಿಂದ!"

**-The Mahratta, Nov. 30, 1945.**

## ೭ ನೇತಾಜಿ ಪೂರ್ವಏಶಿಯದ ಸಮ್ರಾಟ್!

ಮುಸ್ಲಿಂ ಧನಿಕನೊಬ್ಬನು ಹೇಳುತ್ತಿದ್ದ:

"ಅಬ್ಬಾ, ನಮ್ಮ ನೇತಾಜಿಯ ಹೃದಯ ಎಷ್ಟು ದೊಡ್ಡದು! ಎಲ್ಲ
ಾರತೀಯರೂ ಒಂದೇ ಎಂಬುದನ್ನು ಆತ ನಮಗೆ ಕಲಿಸಿದ. ಯಾರೂ
ಂದು ಅಲ್ಲ, ಯಾರೂ ಮುಸಲ್ಮಾನ್ ಅಲ್ಲ, ನಾವು ಮುಸಲ್ಮಾನರೆಂಬ
ಾವನೆಯೇ ನಮ್ಮಲ್ಲಿ ಅಳಿದು ಹೋಗಿತ್ತು."

"ಆತ ನಮ್ಮ ತಂದೆಯಾಗಿದ್ದ. ನಾವೆಲ್ಲ ಆತನ ಸೇವಕರಾಗಿದ್ದೆವು."

* * * *

"ಟೋಕಿಯೋದಿಂದ ಇಂಫಾಲದವರೆಗೆ ಆತನ ಹೆಸರು ಹಬ್ಬಿತ್ತು.
ಇಡೀ ಪೂರ್ವಏಶಿಯದ ಸಮ್ರಾಟ್ ಆಗಿದ್ದ!"

ಅಲ್ಲದೇನು ಮತ್ತೆ ? ಏನು ಆತನ ಸಾಹಸ, ಏನು ಆತನ ವಚ
ಏನು ಆತನ ದರ್ಪ!

ಅದೇ ಗೃಹಸ್ಥ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ:

" ಒಮ್ಮೆ ಒಬ್ಬ ಹೆಂಗುಸು ಒಂದು ಮನವಿಯನ್ನು ತಂದ
ನಾನು ಹತ್ತಿರವೇ ಕುಳಿತಿದ್ದೆ. ಒಳ್ಳೆಯ ಮುದ್ದಾಗಿ ಬರೆದುದಾಗಿ
ಆ ಮನವಿ. ಆಕೆ ತನ್ನ ಇತಿವೃತ್ತವನ್ನು ತೋಡಿಕೊಂಡಳು. ಅ
ಯನ್ನು ಓದಿಕೊಂಡಾಯಿತು. ಬಾಬೂಜಿ ಶರಾ ಬರೆದ—' ಶ್ರೀ......
ರನ್ನು ಒಡನೆಯೆ ಬಿಡಬೇಕೆಂದು ನನ್ನ ಬೇಡಿಕೆ.'

" ಅರ್ಜಿಯನ್ನು ತೆಗೆದುಕೊಂಡು ಆ ಹೆಂಗಸು ಜಪಾನೀ
ಪೋಲೀಸ ಕಚೇರಿಗೆ ಹೋದಳು. ಅಲ್ಲಿಯ ಅಧಿಕಾರಿಗೆ ನೇತಾ
ಅಭಿಮತವನ್ನು ತೋರಿಸಲಾಯಿತು. ಮೊದಲು ತಿರಸ್ಕಾರವನ್ನು ತೋರಿ
ಆ ಜಪಾನೀ ಅಧಿಕಾರಿ. ' ನಮ್ಮ ಕೆಲಸದಲ್ಲಿ ವ್ಯತ್ಯಯ ತರುವು
ಅಧಿಕಾರವೇನಿದೆ ಮಿ. ಬೋಸನಿಗೆ?' ಎಂದು ಅವನು ಗುರುಗುಟ್ಟಿದ

ಆದರೆ ನಿರಾಕರಿಸಲು ಧೈರ್ಯ ಬೇಡವೆ? ಪೂರ್ವಏಶಿ
ಸಮ್ರಾಟನ ಅಭಿಮತವದು!

" ಬಳಿಕ ಅಧಿಕಾರಿ ತಣ್ಣಗಾದ. ಅರ್ಜಿಯನ್ನು ತನ್ನ ಮೇ
ಕಾರಿಯ ಕಡೆ ಒಯ್ದ. ಮೇಲಧಿಕಾರಿ ಜಪಾನ ಮತ್ತು ಆಜಾದ ಹಿ
ಸರಕಾರಗಳ ಸಂಯೋಜಕ ಪ್ರಮುಖರನ್ನು ಕರೆಯಿಸಿದ. ಚ
ಯಾಯಿತು. ಸಂಯೋಜಕ ಅಧಿಕಾರಿ ಲಷ್ಕರೀ ಪ್ರಮುಖನಿಗೆ ಹೇಳಿ
' ಮಿ. ಬೋಸರ ಶಬ್ದಕ್ಕೆ ಬಾದಶಹನ ಶಬ್ದಕ್ಕೆ ಕೊಡುವಷ್ಟು ಮಯಾ
ಕೊಡಬೇಕು.'

" ಶ್ರೀ.......... ರನ್ನು ತತ್‌ಕ್ಷಣ ಬಿಡುಗಡೆ ಮಾಡಲಾಯಿ
ನೇತಾಜಿಗೆ ಇಷ್ಟೊಂದು ಗೌರವವಿತ್ತು."

* * * *

" ನೇತಾಜಿ ಬರುವ ಪೂರ್ವದಲ್ಲಿಯೇ ಸುಮಾರು ನಾಲ್ಕು
ಭಾರತೀಯರನ್ನು ಜಪಾನಿಗಳು ಹಿಡಿದಿದ್ದರು. ಗುಪ್ತ ಹೇರರೆಂದು ಅ
ಬಗ್ಗೆ ಆಪಾದನೆಯಿತ್ತು. ಅವರನ್ನು ಪರಿಪರಿಯಿಂದ ಪೀಡಿಸಿದರು.

"ನೇತಾಜಿ ರಂಗೂನಿಗೆ ಬಂದಮೇಲೆ ಅವರೆಲ್ಲರ ಕಾಗದ-ಪತ್ರ ಗಳನ್ನು ತರಿಸಿದ. ಕೊನೆಗೆ ಅವರೆಲ್ಲರನ್ನೂ ಬಂಧನದಿಂದ ಬಿಡಿಸಿದ."

"ಆತ ದಿನಕ್ಕೆ ಹದಿನೆಂಟು ತಾಸು ಕೆಲಸ ಮಾಡುತ್ತಿದ್ದ. ತೀರ ಸಾಧುವಿನಂತೆ ಆತನ ಇರುವಿಕೆ. ಯಾವಾಗಲೂ ನಗುಮೊಗ."

* * * *

ಜಪಾನಿಗಳ ಮೇಲೆ ಚೆನ್ನಾಗಿಯೇ ಪ್ರಭಾವ ಬೀರಿದ್ದ ನೇತಾಜಿ. ಜನರಲ್ ಟೋಜೋ ಮತ್ತು ಸಿಗೆಮಿತ್ಸು ಅವರು ಈತನ ಕಡೆ ಎಡತಾಕು ತ್ತಿದ್ದರು. ಚೀನ, ಫಿಲಿಪಾಯಿನ್, ಬ್ರಹ್ಮದೇಶ, ಥ್ಯಾಲಂಡಗಳ ಸೋಗಿನ ಮುಂದಾಳುಗಳಿಗಿಂತ ಈತ ತೀರ ಭಿನ್ನ, ಜಪಾನಿ ಸೇನಾಧಿಕಾರಿಗಳಾಗಲಿ, ಸೇನಾ ಪೋಲೀಸರಾಗಲಿ ಈತನಿಗೆಂದೂ ಅಡ್ಡ ಬರುತ್ತಿರಲಿಲ್ಲ. ಈತನ ಭಾವಚಿತ್ರದ ಹತ್ತಿರ ಹಾಯ್ದು ಹೋಗುತ್ತಿದ್ದರೆ ಜಪಾನಿ ಸೇನಾಧಿಕಾರಿ ಗಳು ನಿಂತು ವಂದಿಸಿ ಮುಂದೆ ಸಾಗುತ್ತಿದ್ದರು.

ಪೂರ್ವ ಸಮ್ಮತಿಯಿಲ್ಲದೆ ಯಾವ ದೊಡ್ಡ ಜಪಾನೀ ಅಧಿಕಾರಿಗೂ ನೇತಾಜಿಯ ದರ್ಶನ ಲಭಿಸದು. ಮನೆಯಲ್ಲಿ ಪ್ರವೇಶ ಕೂಡ ದೊರೆಯದು. ಆ ಸಂಬಂಧದ ಸಕಲ ವಿಧಿಗಳನ್ನೂ ಅವರು ಪಾಲಿಸಬೇಕಾಗಿತ್ತು.

ಆಜಾದ ಹಿಂದ ಸರಕಾರಕ್ಕೆ ಜಪಾನ ಸರಕಾರವು ಮಾನ್ಯತೆ ಕೊಟ್ಟ ಕಾಲಕ್ಕೆ ತನ್ನೊಬ್ಬ ಅಧಿಕೃತ ರಾಯಭಾರಿಯನ್ನು ಕಳಿಸಿತ್ತು. ಜಪಾನೀ ರಾಯಭಾರಿ ರಂಗೂನಿಗೆ ಬಂದ. ಸುಭಾಸ ಬಾಬುವಿನ ದರ್ಶನವನ್ನು ಕೋರಿದ. "ನೀವು ರಾಯಭಾರಿಯೆಂಬ ಬಗ್ಗೆ ನಮ್ಮ ಪರರಾಷ್ಟ್ರ ಮಂತ್ರಿಯ ಕಡೆ ಕಾಗದ ಒಪ್ಪಿಸಿರಿ. ನೋಡಿ ಸರಿಯಿದ್ದರೆ ದರ್ಶನ ಕೊಡಲಾದೀತು" ಎಂದು ಸುಭಾಸ ಹೇಳಿಕಳಿಸಿದ.

"ಕಾಗದ ಟೋಕಿಯೋದಲ್ಲಿಯೇ ಉಳಿದು ಬಿಟ್ಟಿದೆ" ಎಂದು ರಾಯಭಾರಿ ತಿಳಿಸಿದ.

"ಹಾಗಾದರೆ ಭೆಟ್ಟಿ ಸಾಧ್ಯವಿಲ್ಲ." ಸುಭಾಸ ತಿಳಿಸಿದ.

ಪಾಪ, ಜಪಾನಿ ರಾಯಭಾರಿ ತಲೆತಗ್ಗಿಸಿಕೊಂಡು ಸುಮ್ಮನೆ ಮರಳಿದ.

# ೮ ಸ್ವತಂತ್ರ ಭಾರತ ಸರಕಾರ ಮತ್ತು ಸಮರ ಸನ್ನಾಹ.

ಈ ಅಂದೋಲನವನ್ನು ಹೆಚ್ಚು ಶಕ್ತಿಸಂಪನ್ನವಾಗಿ ಮಾಡಲಿ
೧೯೪೩ನೆಯ ಅಕ್ಟೋಬರ್ ೨೧ನೆಯ ದಿವಸ ಸ್ವತಂತ್ರ ಭಾರ
ತಾತ್ಪೂರ್ತಿಕ ಸರಕಾರದ ಸ್ಥಾಪನೆಯಾಯಿತು. ಸುಭಾಸಚಂದ್ರ ಬೊ
ಅದರ ಮುಖ್ಯ ಮಂತ್ರಿಯಾದ. ಮುಖ್ಯ ಮಂತ್ರಿಯ ಕಡೆ ವಿದೇಶ ಖ
ಯುದ್ಧ ಖಾತೆಗಳಿದ್ದವು. ಕ್ಯಾಪ್ಟನ್ ಶ್ರೀಮತಿ ಲಕ್ಷ್ಮಿ ಮಹಿಲಾ ಶಾಖ
ಮಂತ್ರಿ. ಎಚ್. ಎಸ್. ಎ. ಅಯ್ಯರ ಪ್ರಚಾರ ಮಂತ್ರಿ. ಲೆ. ಕ. ಚಟ
ಅರ್ಥಮಂತ್ರಿ. ಈ ಮಂತ್ರಿಮಂಡಲದಲ್ಲಿ ಏಳು ಜನ ಸಲಹೆಗಾರರಿದ್ದ
ಮುಖ್ಯ ಸಲಹೆಗಾರರು ರಾಸಬಿಹಾರಿ ಘೋಷ ಮತ್ತು ಕರೀಮ
ದೀನಾನಾಥ ದಾಸ, ಡಿ. ಎಂ. ಖಾನ, ಎ. ಮಲ್ಲಪ್ಪ, ಜೆ. ಥಿವಿ, ಸರ
ಈಶ್ವರಸಿಂಗ ಇವರಾರು ಜನ ಸಲಹೆಗಾರರು. ಅಲ್ಲದೆ ಎಂಟು
ಲೆಫ್ಟನಂಟ್ ಕರ್ನಲ್ಲರು ಸೈನ್ಯ ಪ್ರತಿನಿಧಿಗಳಿದ್ದರು. ಅಜೀಜ ಅಹಮ್ಮ
ಭಗತ, ಜಿ. ಕೆ, ಭೋಸಲೆ, ಗುಲ್ಜಾರಸಿಂಗ, ಕಯಾನಿ, ಲೋಕನಾಥ
ಇಶಾನ ಕಾದಿರ, ಶಹಾನವಾಜ.

ತಾತ್ಪೂರ್ತಿಕ ಆಜಾದ ಹಿಂದ ಸರಕಾರದ ಮಂತ್ರಿಗಳು ಭಾರತೀ
ಸ್ವಾತಂತ್ರ್ಯಸಂಘದ ಮುಖ್ಯ ಕಚೇರಿಯ ಶಾಖೆಗಳ ಮುಖಾಂತರ
ಕಾರ್ಯ ಮಾಡುತ್ತಲಿದ್ದರು. ಪೂರೈಕೆ ಖಾತೆ, ಅರ್ಥ ಖಾತೆ, ಲೆಕ್ಕ ಶೋ
ಖಾತೆ, ಸೈನ್ಯ ಭರತಿ ಮತ್ತು ಶಿಕ್ಷಣ ಖಾತೆ. ಪ್ರಕಟನೆ ಮತ್ತು ಪ್ರ
ಖಾತೆ, ಬರ್ಮಾ ಟ್ರ್ಯಾಂಚಿಸ್ ಡಿಪಾರ್ಟಮೆಂಟ್, ಮಹಿಲಾ ವಿಭಾ
ಶಿಕ್ಷಣ ಖಾತೆ, ಸಾರ್ವಜನಿಕ ಆರೋಗ್ಯ ಮತ್ತು ಸಮಾಜ ಸೇವಾ ಖಾ
ಪುನರ್ಘಟನಾ ಖಾತೆ ಮೊದಲಾದ ಹತ್ತೊಂಬತ್ತು ಖಾತೆಗಳಲ್ಲಿ ಸಂ
ಕಾರ್ಯಗಳ ವಿಭಜನೆಯಾಗಿದ್ದಿತು. ಸಂಘದ 'ರಿಅರ್ ಹೆಡ್ ಕ್ವಾರ್ಟ
ಸಿಂಗಾಪುರದಲ್ಲಿದ್ದಿತು. ಮಲಯ, ಸುಮಾತ್ರ, ಜಾವಾ, ಬೋರ್ನಿಯ
ಗಳು ಇದರ ನಿಯಂತ್ರಣದಲ್ಲಿದ್ದವು.

ಇಂಗ್ಲಂಡಿನೊಡನೆ ಹೋರಾಡುತ್ತಿದ್ದ ಎಲ್ಲ ದೇಶಗಳೂ ಈ ಸ್ವತಂತ್ರ ಭಾರತ ಸರಕಾರಕ್ಕೆ ಮನ್ನಣೆಯಿತ್ತವು. ಆಕ್ಟೋಬರ್ ೨೩ನೆಯ ದಿನ ಈ ಸರಕಾರವು ಇಂಗ್ಲಂಡ-ಅಮೇರಿಕೆಗಳ ವಿರುದ್ಧ ಯುದ್ಧ ಸಾರಿತು. ಸರಕಾರವೆಂದಮೇಲೆ ಅದಕ್ಕೊಂದು ಭೂ-ಪ್ರದೇಶ ಬೇಡವೆ? ಜಪಾನಿಗಳೊಡನೆ ವಿಚಾರ-ವಿನಿಮಯ ಮಾಡಿ, ಅಂದಮಾನ-ನಿಕೋಬಾರಗಳನ್ನು ಸಂಪಾದಿಸಲಾಯಿತು.

ಸರಕಾರಕ್ಕೆ ತನ್ನದಾದುದೊಂದು ಸೇನೆಯಂತೂ ಬೇಕೇಬೇಕು. ಅದು ಮೊದಲೇ ಇತ್ತು; ಇದೀಗ ಪುನರ್ಘಟಿತವಾಗಿತ್ತು. ಈ ಆಜಾದ ಹಿಂದ ಸೇನೆಯಲ್ಲಿ ಮೂರು ಡಿವಿಜನ್ನುಗಳು ಸಜ್ಜಿತವಾದುವಿದ್ದವು. ಇವುಗಳಲ್ಲಿ ನೂರಕ್ಕೆ ಆಱರಷ್ಟು ಹಿಂದಿನ ಸೈನಿಕರೇ ಇದ್ದರು. ಎರಡು ಡಿವಿಜನ್ನುಗಳು ಶಿಕ್ಷಣವನ್ನು ಪಡೆಯುತ್ತಲಿದ್ದವು. ಇನ್ನೊಂದು ಡಿವಿಜನ್ನಿನಲ್ಲಿ ಭರತಿ ನಡೆದಿತ್ತು. ಹೊಸ ಭರತಿ ಪೂರ್ವಏಶಿಯದ ವ್ಯಾಪಾರಿಗಳಿಂದಲೂ ಇತರ ಪ್ರಜೆಗಳಿಂದಲೂ ಮಾಡಿದುದಾಗಿತ್ತು.

ಹೊಸದಾಗಿ ಸೈನ್ಯಕ್ಕೆ ಸೇರಿದವರ ಶಿಕ್ಷಣಕ್ಕಾಗಿ ಅಲ್ಲಲ್ಲಿ ಶಿಬಿರಗಳನ್ನು ತೆರೆಯಲಾಗಿತ್ತು. ಮಲಯದಲ್ಲಿಯ ನಾಲ್ಕು ಶಿಬಿರಗಳಲ್ಲಿ ೭೦೦೦ ಸೈನಿಕರು, ಥ್ಯಾಯಲಂಡದ ಒಂದು ಶಿಬಿರದಲ್ಲಿ ೧೦೦೦೦ ಸೈನಿಕರು, ಬ್ರಹ್ಮದೇಶದ ನಾಲ್ಕು ಶಿಬಿರಗಳಲ್ಲಿ ೩೦೦೦ ಸೈನಿಕರು. ಸಿಂಗಾಪೂರ-ರಂಗೂನಗಳಲ್ಲಿ ಅಧಿಕಾರಿಗಳಿಗಾಗಿ ಶಿಕ್ಷಣಾಲಯಗಳಿದ್ದವು. ಅಲ್ಲಿ ಅದ್ಯತನ ಪದ್ಧತಿಯ ಸಂಪೂರ್ಣ ಸೈನ್ಯ ಶಿಕ್ಷಣ ಕೊಡಲಾಗುತ್ತಿತ್ತು. ಶಿಕ್ಷಕರಲ್ಲಿ ಒಬ್ಬನಾದರೂ ಜಪಾನಿ ಅಧಿಕಾರಿಯಾಗಲಿ ಸಾಮಾನ್ಯ ಜಪಾನಿಯಾಗಲಿ ಇರಲಿಲ್ಲ. ಅವರೆಲ್ಲರೂ ಹಿಂದೀಯರೇ. ಸ್ತ್ರೀಯರಿಗಾಗಿ ಸಿಂಗಾಪುರ ರಂಗೂನಗಳಲ್ಲಿ ಸೈನ್ಯ ಶಿಕ್ಷಣ ಶಿಬಿರಗಳಿದ್ದವು.

ಸ್ವತಂತ್ರ ಭಾರತ ಸರಕಾರವು ಯುದ್ಧವನ್ನು ಸಾರಿದ ಮೇಲೆ, ೧೯೪೩ರ ಕೊನೆಯಲ್ಲಿ, ಹಿಂದುಸ್ತಾನದ ಸಮೀಪಕ್ಕೆ— ಬ್ರಹ್ಮದೇಶಕ್ಕೆ— ಸರಕಾರದ ಮುಖ್ಯ ಠಾಣ್ಯವನ್ನು ಸಾಗಿಸುವ ಆವಶ್ಯಕತೆ ಕಂಡುಬಂದಿತು. ಇದು ೭–೧–೧೯೪೪ನೆಯ ದಿನ ಕಾರ್ಯರೂಪಕ್ಕೆ ಬಂದಿತು. ಸರಕಾರವು ರಂಗೂನಕ್ಕೆ ಬಂದಿತು.

ಆದರೆ ಬ್ರಹ್ಮದೇಶದಿಂದ ಏರಿಹೋಗುವುದು ಜಪಾನಿಗಳಿಗೆ ಇಷ್ಟ ವಾಗಿರಲಿಲ್ಲ. ಹುಕ್ವಾಂಗ ಕೊಳ್ಳದಲ್ಲಿಂದ ಬ್ರಿಟಿಶರು ದಾಳಿ ಮಾಡಿದ್ದ ರಿಂದಲೂ ಚಿದವೀನ ನದಿಯನ್ನು ದಾಟಿ ಬಂದು ದಾಳಿಯಿಡುವ ಸಂಭವ ವಿದ್ದುದರಿಂದಲೂ ಜಪಾನಿಗಳು ನಿರುಪಾಯರಾಗಿದ್ದರು. ಆದರೂ ಇಂಫಾ ಲವನ್ನು ವಶಪಡಿಸಿಕೊಂಡ ಬಳಿಕ ಆಜಾದ ಹಿಂದ ಸೇನೆಯನ್ನು ಯುದ್ಧ ಮಾಡಗೊಡಬೇಕೆಂಬ ಅವರ ಯೋಜನೆಯಿದ್ದಿತು. ನೇತಾಜಿ ಸುಭಾಸ ಇದನ್ನೊಪ್ಪಲಿಲ್ಲ. ಆರಾಕಾನ ಮಣಿಪುರ ದಾಳಿಗಳಲ್ಲಿ ಭಾಗವಹಿಸಲು ತನ್ನ ಸೇನೆಗೆ ಆಸ್ಪದ ಕೊಡಬೇಕೆಂದು ಹಟ ಹಿಡಿದ.

## ೯ ದಿಲ್ಲೀ ಚಲೋ

"ಈ ಕ್ಷಿತಿಜದಾಚೆ, ನದಿಯ ಆಕಡೆ, ವನರಾಜಿಯ ಹಿಂದೆ, ಆ ಬೆಟ್ಟದ ಮರೆಯಲ್ಲಿ ನಮ್ಮ ಮಾತೃಭೂಮಿಯಿದೆ. ಆಕೆಯ ಚರಣರಜದಲ್ಲಿ ನಾನೂ ನೀವೂ ಹುಟ್ಟಿದ್ದು. ನಾವು ಪುನಃ ಆ ಭೂಮಿಗೆ ಹೋಗಬೇಕಾ ಗಿದೆ. ಕೇಳಿರಿ, ಕೇಳಿರಿ! ನಮ್ಮ ಭಾರತ ನಮ್ಮನ್ನು ಕರೆಯುತ್ತಿದೆ. ನಮ್ಮ ರಾಜಧಾನಿ ದಿಲ್ಲಿ ನಮ್ಮನ್ನು ಕರೆಯುತ್ತಿದೆ. ನಮ್ಮ ಮೂವತ್ತೆಂಟು ಕೋಟಿ ಬಾಂಧವರು ನಮ್ಮನ್ನು ಕರೆಯುತ್ತಿದ್ದಾರೆ!

"ರಕ್ತವು ರಕ್ತದ ಕಡೆ ಹರಿಯುತ್ತಿದೆ. ಅಣಿಯಾಗಿರಿ. ಸಂಧಿಯನ್ನು ಕಳೆದುಕೊಳ್ಳಲಾಗದು. ಶಸ್ತ್ರಾಸ್ತ್ರಗಳು ಸಿದ್ಧವಾಗಿರಲಿ. ಇದೋ ನೋಡಿರಿ, ಗುಡ್ಡಗಾಡು ಹಾದಿ ನಮ್ಮೆದುರು ಕಾಣುತ್ತಿದೆ. ನಮ್ಮ ಬಾಂಧವರೇ ಕಟ್ಟಿದ್ದು ಇದು. ಈ ಹಾದಿಯಿಂದ ನಾವು ಮುಂಬರಿಯುವ. ದೇವರ ದಯೆಯಿದ್ದರೆ ಶತ್ರುಗಳ ಮಧ್ಯದಲ್ಲಿಯೂ ಹಾದಿ ಮಾಡಿಕೊಳ್ಳ ಬಲ್ಲೆವು. ಇಲ್ಲವೆ ಹುತಾತ್ಮರಾಗಿ ಮರಣಹೊಂದುವೆವು. ನಮ್ಮ ಈ ಅಂತಿಮ ನಿದ್ರೆಯಲ್ಲಿ ದಿಲ್ಲೀ ಮಾರ್ಗದ ಧೂಳಿಯನ್ನು ಚುಂಬಿಸುವೆವು.

"ದಿಲ್ಲೀ ಮಾರ್ಗ ಸ್ವಾತಂತ್ರ್ಯದ ಮಾರ್ಗ! ನಡೆಯಿರಿ ದಿಲ್ಲಿಗೆ!"

೧೯೪೪ನೆಯ ಫೆಬ್ರುವರಿ ೪ನೆಯ ತಾರೀಖಿನ ದಿನ ಆಜಾದ ಹಿಂದ ಫೌಜು ಈ ಸಂದೇಶವನ್ನು ಹೃದಯದಲ್ಲಿ ತಳೆದು ದಾಳಿಯನ್ನಾರಂಭಿಸಿತು. ಮಾರ್ಚ ೧೮ಕ್ಕೆ ಭಾರತ ಬ್ರಹ್ಮದೇಶಗಳ ಶೀಮೆಯನ್ನುಲ್ಲಂಘಿಸಿತು.

ಜಪಾನಿ ದಲಗಳೊಂದಿಗೆ ಆಜಾದ್ ಹಿಂದ್ ಸೇನೆಯ ದಲಗಳು ಮೋರಾಯಿ ಕೋಹಿಮಾ ಮತ್ತು ಬೇರೆ ಕೆಲವು ಗ್ರಾಮಗಳನ್ನು ವಶಪಡಿಸಿಕೊಂಡು ಇಂಫಾಲಕ್ಕೆ ಮುತ್ತಿಗೆ ಹಾಕಿದವು. ಆದರೆ ಮಳೆಯ ತೊಂದರೆ, ವೈಮಾನಿಕ ಸಹಾಯದ ಕೊರತೆ, ಪೂರೈಕೆಗುಂಟಾದ ಅಡೆ-ತಡೆಗಳಿಂದಾಗಿ ಈ ಸೈನ್ಯವು ಹಿಂದೆ ಸರಿಯಬೇಕಾಯಿತು.

ಒಂದು ಡಿವಿಜನ್ನಿನಲ್ಲಿ ನಾಲ್ಕು ಬ್ರಿಗೇಡ್ಸ ಇರುತ್ತಿದ್ದವು. ರಣಕ್ಷೇತ್ರಕ್ಕೆ ಬಂದ ಮೊದಲನೆಯ ಡಿವಿಜನ್ನಿನಲ್ಲಿ ೧. ಸುಭಾಸ ಬ್ರಿಗೇಡ್, ೨. ಗಾಂಧಿ ಬ್ರಿಗೇಡ್, ೩. ಆಜಾದ ಬ್ರಿಗೇಡ್, ೪. ನೆಹರು ಬ್ರಿಗೇಡ್‌ಗಳಿದ್ದವು. ಲೆ. ಕ. ಶಹಾನವಾಜ ಸುಭಾಸ ಬ್ರಿಗೇಡಿನ ಕಮಾಂಡರ್. ಇದರಲ್ಲಿ ಒಟ್ಟು ೩೨೦೦ ಸೈನಿಕರು. ಹೆಚ್ಚಿನವರು ಪಠಾಣರು, ಕೆಲವರು ಶೀಖರು ಮತ್ತು ನಾಗರಿಕರು. ಗಾಂಧಿ ಬ್ರಿಗೇಡಿನ ಕಮಾಂಡರ್ ಕರ್ನಲ್ ಇನಾಯತ ಕಯಾನಿ. ಇದರ ಸೈನಿಕ ಸಂಖ್ಯೆ ೨೮೦೦. ಆಜಾದ ಬ್ರಿಗೇಡಿನ ಕಮಾಂಡರ್ ಕರ್ನಲ್ ಝುಲಮಾರಸಿಂಹ. ಸೈನಿಕರು ೧೮೦೦. ಕ. ಗುರುಬಕ್ಷಸಿಂಗ ಥಿಲನ ನೆಹರೂ ಬ್ರಿಗೇಡಿನ ಕಮಾಂಡರ್. ಸೈನಿಕರು ೩೦೦೦.

ಮೊದಲಿನ ಮೂರು ಬ್ರಿಗೇಡುಗಳೂ ೭೦೦ ನಾಗರಿಕ ಸಹಾಯಕರೂ ಬಹಾದೂರ ಗುಂಪಿನ ೩೦೦ ಜನರೂ ಇಂಫಾಲದ ರಣಕ್ಷೇತ್ರದಲ್ಲಿದ್ದರು. ಇವರಲ್ಲಿ ಹಿಂದಿರುಗಿದವರು ೩೮೦೦ ಜನ ಮಾತ್ರ. ಉಳಿದವರು ಸಂಗ್ರಾಮದಲ್ಲಿ ಹಲವರು, ರೋಗಗಳಿಂದ ಕೆಲವರು ಮಡಿದರು. ಆಜಾದ ಹಿಂದ ಸೇನೆಗೆ ಒಂದೂ ವಿಮಾನವಿರಲಿಲ್ಲ. ಕಮಾಂಡರರ ಹತ್ತಿರ ಒಂದು ಮೋಟಾರು ಇರುತ್ತಿತ್ತು. ಸಾಮಗ್ರಿಗಳನ್ನು ಸಾಗಿಸುವುದಕ್ಕೆ ಲಾರಿಗಳಿರಲಿಲ್ಲ. ಶಸ್ತ್ರಾಸ್ತ್ರಗಳನ್ನು, ಮದ್ದು-ಗುಂಡುಗಳನ್ನು, ಅನ್ನವನ್ನು ಇತರ ಸಾಮಾನುಗಳನ್ನು ಸೈನಿಕನೇ ಹೊತ್ತುಕೊಂಡು ಹೋಗುತ್ತಿದ್ದ.

ಸೇವಿಯಾದಲ್ಲಿ ಆಸ್ಪತ್ರಿಯಿತ್ತು, ಕಾಲೇವಾದಲ್ಲಿ ಆರೋಗ್ಯ ಕೇಂದ್ರವಿತ್ತು. ಆದರೆ ಔಷಧಗಳು ಸಾಕಷ್ಟಿರಲಿಲ್ಲ. ಆರೋಗ್ಯಕೇಂದ್ರದಲ್ಲಿ ಯಂತ್ರೂ ಯಾನ ಸಾಹಿತ್ಯಗಳೂ ಇರಲಿಲ್ಲ. ಅಲ್ಲಿಗೆ ಹೋದ ಸೈನಿಕರು ಧೋ ಧೋ ಸುರಿಯುವ ಮಳೆಯಲ್ಲಿ ಮೂರು ಮೂರು ಗಂಟೆ ನಿಲ್ಲಬೇಕಾ

ಗುತ್ತಿತ್ತು. ಅನ್ನ ಸಂಗ್ರಹವಂತೂ ಚಿಂದವಿನ್ ದಾಟಿದೊಡನೆಯೆ ತೀರಿತು. ಅನೇಕ ದಳಗಳು ಅಡವಿಯಲ್ಲಿ ಗಡ್ಡೆ-ಗೆಣಸು ತೊಪ್ಪಲುಗಳಿಂದ ಹೊಟ್ಟೆ ತುಂಬಿಕೊಳ್ಳುತ್ತಿದ್ದರು.

**ದಾಸ್ಯದ ತುಕಡಿ ತುಪ್ಪಕ್ಕಿಂತ ಸ್ವಾತಂತ್ರ್ಯದ ಹುಲ್ಲೇ ಲೇಸು**

ಹೀಗೆ ಆಜಾದ ಹಿಂದ ಸೇನೆಯ ಸೈನಿಕರು ಅವಿಚಲ ಶ್ರದ್ಧೆಯಿಂದ ಸ್ವಾತಂತ್ರ್ಯಕ್ಕಾಗಿ ಕಾದಿ ಮಡಿದರು. ಅವರು ಧನ್ಯರು, ಪ್ರಾತಃಸ್ಮರಣೀಯರು. ಇಂಫಾಲ ರಣರಂಗದಲ್ಲಿ ಈ ವೀರರು ತೋರಿದ ಸ್ವಾತಂತ್ರ್ಯ ಪ್ರೀತಿಯ– ತಾವು ಉದರ ದಾಸರಲ್ಲವೆಂಬ ಖ್ಯಾತಿಯ ಪ್ರಸಂಗಗಳು ಅತ್ಯಂತ ಮರ್ಮಸ್ಪರ್ಶಿಯಾಗಿವೆ.

ಇಂಫಾಲದ ರಣಕ್ಷೇತ್ರ. ಒಂದು ಕಡೆ ದಿಲ್ಲೀ ಸರಕಾರದ ಹಿಂದೀ ಸೈನ್ಯ, ಒಂದು ಕಡೆ ಆಜಾದ ಹಿಂದ ಫೌಜ. ಎರಡೂ ಸೈನ್ಯಗಳು ಪರಸ್ಪರರನ್ನು ತಮ್ಮ ಕಡೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತಿದ್ದವು. ಇಬ್ಬರ ನಡುವೆ ಕೆಲ ಮರಗಳು ಮಾತ್ರ ಇದ್ದವು. ಆಜಾದ ಸೈನಿಕರು ಒಂದು ಮರಕ್ಕೆ ಹಲಗೆ ಹಚ್ಚಿದರು—

" ನಮ್ಮನ್ನು ಸೇರಿರಿ— ಸ್ವಾತಂತ್ರ್ಯಕ್ಕಾಗಿ ಕಾದಿರಿ. "

ಅದಕ್ಕೆ ದಿಲ್ಲೀ ಸೈನಿಕರು ಉತ್ತರವಿತ್ತರು—

" ನೀವು ಜಪಾನದ ದಾಸರು, ಹೊಟ್ಟೆಗಾಗಿ ಸಾಯುತ್ತಿದ್ದೀರಿ. ಉಪ್ಪುಂಡು ತಿರುಗಿ ಬೀಳುತ್ತಿದ್ದೀರಿ. ಇತ್ತ ಬನ್ನಿರಿ, ನಿಮಗೆ ಯಥೇಷ್ಟ ಆಹಾರ ಸಿಕ್ಕುವುದು. "

ಆಜಾದ ಸೈನ್ಯದ ಪ್ರತ್ಯುತ್ತರ—

" ದಾಸ್ಯದ ತುಕಡಿ ತುಪ್ಪಕ್ಕಿಂತಲೂ ಸ್ವಾತಂತ್ರ್ಯದ ಹುಲ್ಲೇ ಲೇಸು. ಜಪಾನದ ದಾಸರು ನಾವಲ್ಲ. ನಾವು ನೇತಾಜಿಯ ಆಜ್ಞೆಯಂತೆ ಕಾದುತ್ತಿದ್ದೇವೆ. "

**ಮಾಡುವೆವು ಇಲ್ಲವೆ ಮಡಿಯುವೆವು**

ಇಂತಹದೇ ಉದ್ಬೋಧಕವಾದ ಉದಾಹರಣೆ ಇನ್ನೊಂದಿದೆ. ನೇತಾಜಿಯ ವಾಕ್ಯವೆಂದರೆ ದೇವವಾಕ್ಯ ಆಜಾದ ಸೈನಿಕನಿಗೆ. ನುಗ್ಗೆಂದರೆ ನುಗ್ಗಿದ್ದೇ. ತನ್ನ ಕಾಯಕಷ್ಟಗಳನ್ನು ತನ್ನ ತೊಂದರೆಗಳನ್ನು ಮುಂದೊಡ್ಡ



ಆಕಾಶವಾಣಿಯಲ್ಲಿ
ನೇತಾಜಿ



ಸುಭಾಸ ಅನುಯಾಯಿಗಳಾದ
ವೀರಾಂಗನೆಯರು

ಲಾರ, ಲೆಕ್ಕಿಸಲಾರ. ಇಂಫಾಲ ಕದನ ಕಣದಲ್ಲಿ ಆಜಾದ ಹಿಂದ ಸೈನ್ಯಕ್ಕೆ ನಾಯಕನ ಅಪ್ಪಣೆಯಾಯಿತು—

"ಹಿಂದಿರುಗಿರಿ."

ಆಜಾದ ಹಿಂದ ಸೇನೆ ಗಜಬಜಿಸಿತು. ಹಿಂದಿರುಗಬೇಕೆ? ಅದೇಕೆ? ಸೈನಿಕರು ಕೇಳಿದರು—

"ನಾವು ಇಂಫಾಲ ಆಕ್ರಮಿಸಬೇಕು,—ನೇತಾಜಿ ವಿಧಿಸಿದ್ದಾನೆ. ಹಿಂದಿರುಗಲಾಗದೆಂದು ಆತನ ಆಜ್ಞೆ."

ನಾಯಕನು ಅವರಿಗೆ ತಿಳಿಹೇಳಲು ಹವಣಿಸಿದ—

"ನಮ್ಮಲ್ಲಿ ವಾಹನಗಳಿಲ್ಲ, ಸಮರಸಾಹಿತ್ಯಗಳಿಲ್ಲ, ಅನ್ನವಿಲ್ಲ, ಔಷಧವಿಲ್ಲ. ನಾವು ಹಿಂದಿರುಗಲೇ ಬೇಕು."

ಈ ಇಲ್ಲಗಳಿಂದ ಸೈನಿಕರು ಕುಗ್ಗಲಿಲ್ಲ: ಅವರೆಂದರು—

"ನಮಗೇನೂ ಬೇಡ. ನಾವು ಕಾಲ್ನಡಿಗೆ ನಡೆಯುವೆವು, ತೊಪ್ಪಲ ತಿಂದು ಬದುಕುವೆವು: ಔಷಧವಿಲ್ಲದೆಯೆ ಸಾಗುವೆವು; ನಾವು ಇಂಫಾಲ ಆಕ್ರಮಿಸಬೇಕಾಗಿದೆ. ನೇತಾಜಿಯ ಅಪ್ಪಣೆಯಿದೆ—ನಾವು ಹಿಂದಿರುಗುವುದಿಲ್ಲ."

ಆಗ ನೇತಾಜಿಯ ಹಸ್ತಾಕ್ಷರವುಳ್ಳ ಹುಕುಮನ್ನು ತರಿಸಬೇಕಾಯಿತು. ಅದನ್ನು ನೋಡಿದಾಗ ಸೈನಿಕರು ಒಪ್ಪಿದರು. ಸೈನಿಕರ ಹಾಗೂ ಅವರ ನಾಯಕನ ಕಣ್ಣುಗಳಲ್ಲಿ ಅಶ್ರುಗಳು ಮೂಡಿದವು. ಭಗ್ನ ಹೃದಯದಿಂದ ಅವರು ಹಿಂದಿರುಗಿದರು.

## ಜಪಾನಿಗಳಲ್ಲಿ ಒಪ್ಪೊತ್ತಿನ ಅನ್ನ ಹುಟ್ಟಲಿಲ್ಲ

ಇಂಫಾಲ ರಣಾಂಗಣದಲ್ಲಿ ಪಾಲೇಲ ವಿಮಾನ ಠಾಣ್ಯ. ಜಪಾನೀ ಸೈನಿಕರೂ ಆಜಾದ ಸೈನಿಕರೂ ಅದನ್ನು ಸಮೀಪಿಸಿದ್ದರು. ರಾತ್ರಿ ಆ ವಿಮಾನ ಠಾಣ್ಯದ ಮೇಲೆ ದಾಳಿ ಮಾಡುವುದಿತ್ತು. ಆಜಾದ ಸೇನೆಯಲ್ಲಿ ಅನ್ನವಿರಲಿಲ್ಲ. ಅಡವಿಯಿಂದ ಕಂದಮೂಲಗಳನ್ನು ತಂದು ಅವರು ಉದರನಿರ್ವಾಹ ಸಾಗಿಸಿದ್ದರು. ಲಗ್ಗೆ ಹತ್ತುವ ಪೂರ್ವದಲ್ಲಿ ಹೊಟ್ಟೆ ತುಂಬ ಊಟವಾದರೆ ನೆಟ್ಟಗೆ ಎಂದು ಆಜಾದ ಸೇನೆಯ ನಾಯಕನು

ಜಪಾನೀ ನಾಯಕನ ಕಡೆ ಹೋದ. ಪರಿಸ್ಥಿತಿಯನ್ನು ವಿವರಿಸಿ "ಒಪ್ಪೊತ್ತಿನ ಅನ್ನ ಕೊಡಿರಿ" ಎಂದ.

"ನಮ್ಮಲ್ಲಿಯೂ ಅನ್ನ ನಾಸ್ತಿ. ಅನ್ನ ಅಲ್ಲಿ ಇದಿರಿಗೆ ಒಟ್ಟಿದೆ" ಎಂದು ಹೇಳಿ ಜಪಾನಿ ನಾಯಕನು ಪಾಲೇಲ ಠಾಣ್ಯದ ಕಡೆಗೆ ಬೊಟ್ಟು ಮಾಡಿದ. ಆಜಾದ ಸೇನಾನಾಯಕನು ಸಂತಪ್ತನಾದ. "ಆ ಉಗ್ರಾಣದಿಂದ ಅನ್ನವನ್ನು ದೊರಕಿಸುವೆವು: ಆಮೇಲೆಯೇ ನಮ್ಮ ಪಾರಣೆ" ಎಂದು ಪ್ರತಿಜ್ಞೆ ಮಾಡಿದ.

ಅವನು ತಿರುಗಿ ಬಂದ ತನ್ನ ಸೈನ್ಯಕ್ಕೆ ಅಪ್ಪಣೆಯಿತ್ತ—"ಈಗಲೇ ಮುನ್ನುಗ್ಗಿರಿ. ಆಜಾದ ಹಿಂದ ಸೇನೆ ಉಪವಾಸವಾದರೂ ಹೋರಬಲ್ಲುದು, ಗೆಲ್ಲಬಲ್ಲುದು ಎಂಬುದನ್ನು ಈ ಜಪಾನಿಗಳಿಗೆ ತೋರಿಸಿರಿ."

"ಇನ್‌ಕಿಲಾಬ ಜಿಂದಾಬಾದ, ಆಜಾದ ಹಿಂದ ಜಿಂದಾಬಾದ, ಜೈ ಹಿಂದ" ಎಂದು ಘೋಷಿಸುತ್ತ ಆಜಾದ ಸೇನೆ ಮುಂಬರಿಯಿತು. ಪಾಲೇಲದ ವೈಮರೆತಿದ್ದ ಸೈನ್ಯದ ಮೇಲೆ ಬಿದ್ದಿತು. ವಿಮಾನ ಠಾಣ್ಯವೂ ಆಹಾರ ಸಾಮುಗ್ರಿಯ ಉಗ್ರಾಣವೂ ಕೈವಶವಾಯಿತು!

ಬಳಿಕ ದಿಲ್ಲಿಯ ದೊಡ್ಡ ಸೈನ್ಯ ಬಂದಿತು. ಆಜಾದ ಸೇನೆ ವಿಮಾನ ಠಾಣ್ಯವನ್ನು ಬಿಟ್ಟು ಎರಡು ಮೈಲು ಹಿಂದೆ ಸರಿಯಬೇಕಾಯಿತು.

ಹುಲ್ಲು ತಿಂದಾದರೂ ನಿರಾಹಾರದಿಂದಲಾದರೂ ತ್ರಾಣವಿರುವವರೆಗೂ ಕಾದಿ ಪ್ರಾಣನೀಗಿದ ಈ ಸ್ವಾತಂತ್ರ್ಯವೀರರ ರಕ್ತವು ಆರಾಕಾನ, ಪಾಲೇಲ, ಇಂಫಾಲಗಳ ದರಿಕಂದರಗಳನ್ನು ಪಾವನಗೊಳಿಸಿದೆ. ಆ ಭಾಗದ ವಾಯುಮಂಡಲವು ಆ ಸೈನಿಕರ, 'ಇನ್ಕಿಲಾಬ ಜಿಂದಾಬಾದ,' 'ಆಜಾದ ಹಿಂದ ಜಿಂದಾಬಾದ,' 'ದಿಲ್ಲೀ ಚಲೋ' ಘೋಷಣೆಗಳನ್ನು ಪ್ರತಿಯೊಬ್ಬನ ಕಿವಿಯಲ್ಲಿಯೂ ತುಂಬುತ್ತಿದೆ. ಅವರ ಕೀರ್ತಿ ಅಮರವಾಗಿದೆ.

## ೧೦ ಎರಡನೆಯ ಸಂಗ್ರಾಮ

ಬ್ರಿಟಿಶರು ಕೈ ಬಿಟ್ಟರೆ ಆಜಾದ ಹಿಂದ ಚಳವಳಿ ಕುಗ್ಗುತ್ತಿತ್ತು. ಅದಕ್ಕಾಗಿ ೧೯೪೫ರ ಆರಂಭದಲ್ಲಿ ಎರಡನೆಯ ಯುದ್ಧವನ್ನು ನಡೆಸಲಾಯಿತು. ಆತ್ಮರಕ್ಷಣೆಯೇ ಅದರ ಧೋರಣೆ.

ಆಗ ಜಪಾನಿಗಳು ತೊಂದರೆಯಲ್ಲಿದ್ದರು. ಮೊದಲು ಅವರ ಸ್ಥಿತಿ ನೆಟ್ಟಗಿದ್ದಾಗ ಹಿಂದೀಯರನ್ನು ಸಹಕರಿಸಿದ್ದರು. ಅವರ ವಿಜಯದ ಲಾಭ ಇವರಿಗೆ ದೊರೆತಿತ್ತು. ಈಗವರು ತೊಂದರೆಯಲ್ಲಿದ್ದಾಗ ಅವರನ್ನು ತ್ಯಜಿಸುವುದು ಹಿಂದೀಯರಿಗೆ ಸೇರಲಿಲ್ಲ.

ಮುಖ್ಯವಾಗಿ ಈ ಎರಡು ಕಾರಣಗಳಿಂದ ಈ ಕದನ ನಡೆದಿತ್ತು. ಆದರೆ ಆಜಾದ ಹಿಂದ ಸೇನೆಯ ಎಷ್ಟೋ ಅಧಿಕಾರಿಗಳು ವಿರುದ್ಧ ಪಕ್ಷವನ್ನು ಸೇರಿದರು. ಇತರ ಅನೇಕ ಸಣ್ಣ ಅಧಿಕಾರಿಗಳೂ ಸೈನಿಕರೂ ನಿಕರದಿಂದ ಹೋರಾಡಿದರು ಇರಾವತಿ ನದಿಯನ್ನು ದಾಟುವ ಬ್ರಿಟಿಶರ ಎರಡು ಪ್ರಯತ್ನಗಳನ್ನು ಅವರು ವಿಫಲಗೊಳಿಸಿದರು. ಆಜಾದ ಹಿಂದ ಸೈನಿಕರು ಅವಿಚಲವಾಗಿಯೇ ಇದ್ದರು. ಕೊನೆಗೆ ಜಪಾನಿ ವಿಭಾಗವೇ ಹಿಂದಡಿಯಿಟ್ಟಿತು. ಮಿಟಕಿನಾದ ಪತನವಾಗಿ ೧೪ನೆಯ ಸೇನೆ ಭರದಿಂದ ಮುಂದೊತ್ತತೊಡಗಿತು. ಅದನ್ನು ತಡೆಯುವುದು ಜಪಾನಿಗಳಿಗೆ ಸಾಧ್ಯವಾಗಲಿಲ್ಲ. ರಂಗೂನನ್ನು ಬಿಡಬೇಕೆಂದು ನಿರ್ಧಾರವಾಯಿತು.

ಜಪಾನಿ ಮುಖ್ಯಸೇನಾಪತಿಯೂ ಬ್ರಹ್ಮೀಸರಕಾರವೂ ಮುಂಚೆ (ತಾ. ೨೩-೪-೪೬) ರಂಗೂನದಿಂದ ತೆರಳಿದರು. ನೇತಾಜಿ ಸುಭಾಷ ಮತ್ತು ಆತನ ಸರಕಾರ ಹಿಂದಿನಿಂದ (ತಾ. ೨೪-೪-೪೫) ರಂಗೂನನ್ನು ಬಿಟ್ಟು ಬಂಕಾಕಿಗೆ ಹೋದರು. ಅಲ್ಲಿಯ ಹಿಂದೀಯರ ವಿತ್ತ ಜೀವಿತಗಳ ರಕ್ಷಣೆಗಾಗಿ ಆಜಾದ ಹಿಂದ ಸೇನೆಯ ೬೦೦೦ ಸೈನಿಕರನ್ನೂ ಅಧಿಕಾರಿಗಳನ್ನೂ ಮೇಜರ್ ಜನರಲ್ಲನ ನೇತೃತ್ವದಲ್ಲಿ ಹಿಂದೆ ಬಿಡಲಾಯಿತು.

ರಂಗೂನವು ಆಜಾದ ಹಿಂದ ಸೇನೆಯ ವಶದಲ್ಲಿರುವಷ್ಟು ಕಾಲ— ಪುನಃ ಬ್ರಿಟಿಶರ ವಶಕ್ಕೆ ಹೋಗುವ ವರೆಗೆ– ದರೋಡೆ- ಸುಲಿಗೆಗಳಾದ ಉದಾಹರಣೆ ಒಂದೂ ಇಲ್ಲ. ಸ್ವತಂತ್ರ ಭಾರತ ಸಂಘದ ಶಾಖೆಗಳು ಬ್ರಹ್ಮದೇಶದಲ್ಲಿಯ ಭಾರತೀಯರ ಪ್ರಾಣವಿತ್ತಗಳಿಗೆ ಯಾವ ರೀತಿಯಿಂದಲೂ ಧಕ್ಕೆ ತಗಲದಂತೆ ನಿಕರದಿಂದ ಪ್ರಯತ್ನಿಸುತ್ತಿದ್ದವು.

ಆಜಾದ ಹಿಂದ ಸರಕಾರಕ್ಕೆ ಸಾಲ ಕೊಟ್ಟು ನೆರವಾದವರ ಹಣವನ್ನೆಲ್ಲ ಪೈಗೆ ಪೈ ಲೆಕ್ಕಮಾಡಿ ತಿರುಗಿಕೊಡಲಾಯಿತು. ಇದು ಭಾರತೀಯರಿಗೆಲ್ಲ ಎಷ್ಟು ಅಭಿಮಾನಾಸ್ಪದವಾದ ವಿಷಯ!

# ೧೧ ಸುವರ್ಣ ವೃಷ್ಟಿ

ಪೂರ್ವ ಏಶಿಯವನ್ನೆಲ್ಲ ವ್ಯಾಪಿಸಿದ್ದ ಈ ಚಳವಳಿಗೆ, ಈ ಸೈನ್ಯ ಸಂಘಟನೆಗೆ ದುಡ್ಡು ಎಲ್ಲಿಂದ ಬರುತ್ತಿತ್ತು? ಸರಕಾರವು ಜನರಮೇಲೆ ಕರಹೇರಿ ಒತ್ತಾಯದಿಂದ ಸುಲಿದುಕೊಳ್ಳುತ್ತಿತ್ತೇನು? ಛೆ, ಇಲ್ಲ. ಸ್ವಾತಂತ್ರ್ಯಾಭಿಲಾಷಿಗಳಾದ ಭಾರತೀಯ ಧನಿಕರು ಸ್ಫೂರ್ತಿಯಿಂದ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ನೇತಾಜಿ ಸುಭಾಸ ಹಣದ ಅಡ ಚಣೆಯನ್ನು ಅಗತ್ಯವನ್ನು ಸ್ವಲ್ಪ ತಿಳಿಸಿದರೆ ಸಾಕು, ಸುವರ್ಣವೃಷ್ಟಿಯೇ ಆಗುತ್ತಿತ್ತು. ಜನ ತಮ್ಮ ಸರ್ವಸ್ವವನ್ನೂ ಆಜಾದ ಹಿಂದ ಸರಕಾರಕ್ಕೆ ಅರ್ಪಣಮಾಡಿದ ಅನೇಕ ಉದಾಹರಣೆಗಳುಂಟು. ಬ್ರಹ್ಮದೇಶವೊಂದ ರಲ್ಲಿಯೇ ಎರಡು ಕೋಟಿ ರೂಪಾಯಿಗಳು ಕೂಡಿದ್ದವು. ೧೯೪೫ನೆಯ ಜನೆ ವರಿಯಲ್ಲಿ, ಒಂದೇ ಒಂದು ವಾರದೊಳಗೆ, ಹಿಂದುಸ್ಥಾನಕ್ಕೆ ಹೊಸ ವರು ಷದ ಕಾಣಿಕೆಯೆಂದು ನಾಲ್ವತ್ತು ಲಕ್ಷ ರೂಪಾಯಿಗಳನ್ನು ಮಲಯ ಕೊಟ್ಟಿತು.

ಸಭೆಗಳಲ್ಲಿ ನೇತಾಜಿ ಸುಭಾಸನ ಕೊರಳಲ್ಲಿಯ ಹೂಮಾಲೆಯನ್ನು ಹರಾಜು ಮಾಡಿದರೆ ಎಷ್ಟು ಹಣ ಬರಬೇಕು? ಆರಂಭದ ಬೇಡಿಕೆಯೆ ಒಂದು ಲಕ್ಷದ್ದು. ಮುಂದೆ ಅದು ಏರುವುದೂ ಲಕ್ಷದಲ್ಲಿ! ರಂಗೂನದಲ್ಲಿ ಸುಭಾಸ ಸಭೆಗೆ ೨೦–೨೫ ಸಾವಿರ ಜನ ಸೇರುತ್ತಿದ್ದರು. ಹತ್ತು ಹತ್ತು ಮೈಲು ದೂರದಿಂದ ಹೆಂಗುಸರೂ ಹುಡುಗರೂ ಕಾಲ್ನಡಿಗೆಯಿಂದ ಬರು ವರು. ಸುಭಾಸ ಮಾತಾಡುವುದು ಯಾವಾಗಲೂ ಎರಡು ಮೂರು ಗಂಟೆ. ಆಗ ಸರ ಸೇನಾಪತಿಯ ಗಣವೇಷದಲ್ಲಿರುತ್ತಿದ್ದ. ಭಾಷಣದಲ್ಲಿ ಅಡೆ ತಡೆ ಇಲ್ಲ, ದಣಿವಿಲ್ಲ, ಬೇಸರವಿಲ್ಲ. ಮೈ ಅಲಗುತ್ತಿರಲಿಲ್ಲ ಕೂಡ. ಒಮ್ಮೆಯೂ ನೀರು ಗುಟಕರಿಸುವಂತಿಲ್ಲ, ಬಾಯಲ್ಲಿ ಏನೂ ಹಾಕುವಂತಿಲ್ಲ. ಹವೆ ಹೇಗೇ ಇರಲಿ ಮಳೆಸುರಿಯುತ್ತಿರಲಿ, ಭಾಷಣ ನಿಲ್ಲುವಂತಿಲ್ಲ. ಶ್ರೋತೃ ಗಳಾದರೂ ಏನು—ಎಂಥ ಮಳೆ ಬರುತ್ತಿದ್ದರೂ ಕುಳಿತಲ್ಲಿಂದ ಕದಲು ತ್ತಿರಲಿಲ್ಲ. ಇಂಥದೊಂದು ಸಭೆಯಲ್ಲಿ ಸುಭಾಸ ಪುಷ್ಪಹಾರಕ್ಕೆ ೧೨೦೦೦೦ ರೂಪಾಯಿ ಬೆಲೆ ಬಂದಿತು.

ನೇತಾಜಿಯ ಕೊರಳ ಹೂಮಾಲೆಯನ್ನು ಕೊಳ್ಳಲು ಜನ ಎಷ್ಟು ಹಾತೊರೆಯುತ್ತಿದ್ದರು! ಒಂದು ಸಭೆಯ ಸಂಗತಿಯನ್ನು ಕೇಳಿರಿ. ಲಿಲಾವು ಆರಂಭವಾಯಿತು.

"ಒಂದು ಲಕ್ಷ"

"ಎರಡು ಲಕ್ಷ"

"ಮೂರು ಲಕ್ಷ"

"ಐದು ಲಕ್ಷ"

"ಏಳು ಲಕ್ಷ!"

ಪಂಜಾಬಿ ತರುಣನೊಬ್ಬನು ಹಾರದ ಕಡೆಗೇ ನೋಡುತ್ತಲಿದ್ದ. ಲಿಲಾವಿನಲ್ಲಿ ಅವನು ಕೇಳಿಯೂ ಇದ್ದ. ಆದರೆ ಬೆಲೆ ಏರುತ್ತ ಹೋಯಿತು. ಅವನಿಗೆ ತಡೆಯುವದಾಗಲಿಲ್ಲ.

"ನನ್ನ ಸರ್ವ ಸೊತ್ತು!"

ತರುಣನು ಗರ್ಜಿಸಿದ. ಒಂದು ದಿವಸಕ್ಕೆಂದರೆ ಬಾಡಿಹೋಗುವ ಆ ಪುಷ್ಪಮಾಲೆಗೆ ಭರ್‍ರನೆರಗಿದ. ಅದನ್ನು ಸೆಳೆದುಕೊಂಡು ಕಣ್ಣಿಗೊತ್ತಿಕೊಂಡ, ತಲೆಯಮೇಲಿಟ್ಟುಕೊಂಡ, ಬಳಿಕ ಎದೆಗವಚಿಕೊಂಡು ಕುಳಿತ!

ಮರುದಿನ ಅವನು ತನ್ನ ಸೊತ್ತಿನ ಲೆಕ್ಕಮಾಡಿ ಸರ್ವಸ್ವವನ್ನೂ ಆಜಾದ ಹಿಂದ ಸರಕಾರಕ್ಕೆ ಅರ್ಪಿಸಿದ.

* * * *

ಪೀನಾಂಗದಲ್ಲಿ ಎಬ್ಬ ತರುಣನಿಗೆ, ನೇತಾಜಿಗೇನಾದರೂ ಕೊಡಬೇಕೆಂದು ಮನಸಾಯಿತು. ಅವನ ಹತ್ತಿರ ಬೆಳ್ಳಿಯ ಪುಷ್ಪಕರಂಡಕವಿತ್ತು. ಅದನ್ನೇ ನೇತಾಜಿಯ ಪಾದದಡಿಯಲಿಟ್ಟ.

"ನನ್ನೀ ಮಿತ್ರನ ಪ್ರೀತಿಯ ಕಾಣಿಕೆಯನ್ನು ಹರಾಜು ಮಾಡುತ್ತೇನೆ. ಇದನ್ನು ೨೫೦೦೦ ರೂಪಾಯಿಗಳಾಗಿ ಮಾಡಬೇಕಾಗಿದೆ." ಎಂದ ನೇತಾಜಿ.

ಎಂಥ ಜಾದುವೋ! ಏನು ಮೋಹಿನಿಯೋ!

"೫೧೦೦೦!" ಇದು ಬೋಣಿಗೆಯ ಕೇಳಿಕೆ!

ನೇತಾಜಿ ಸದ್ಗದಿತನಾದ.

* * * *

ಒಮ್ಮೆ ರಂಗೂನದಿಂದ ಹೊರಟಿದ್ದ ನೇತಾಜಿ. ಬೀಳ್ಕೊಡುವುದ
ಭಾರತೀಯ ಪ್ರಮುಖರು ವಿಮಾನ ನಿಲ್ದಾಣಕ್ಕೆ ಹೋಗಿದ್ದರು. ವಿಮಾ
ಹೊರಡಲು ಕೆಲ ನಿಮಿಷಗಳಿದ್ದವು. ಸುಭಾಸಬಾಬು ಅವರೊಂದಿ
ಮಾತನಾಡುತ್ತ "ನಮ್ಮ ಸರಕಾರಕ್ಕೆ ೨೦೦೦೦೦ ರೂಪಾಯಿಗಳ ಅಗ
ವಿದೆ" ಎಂದ.

ಅಲ್ಲಿದ್ದಷ್ಟೇ ಜನ, ಹನ್ನೊಂದೇ ನಿಮಿಷಗಳಲ್ಲಿ, ಇಪ್ಪತ್ತು ಲ
ರೂಪಾಯಿಗಳನ್ನು ಸುರಿದರು, ಆತನ ಉಡಿಯಲ್ಲಿ.

* * * *

ಸುಭಾಸ ಬಾಬುವಿನ ಹುಟ್ಟಿದ ದಿನ ಸಮಿಪಿಸಿತ್ತು. ಆಜಾದ ಹಿಂ
ಸರಕಾರದ ಪ್ರಚಾರ ಖಾತೆಯ ಅಧಿಕಾರಿ 'ನೇತಾಜಿಯ ಸುವರ್ಣ ತುಲ
ಭಾರ ನಡಸಲಾಗುವುದು. ಆ ಬಂಗಾರವನ್ನು ಸರಕಾರಕ್ಕೆ ಕಾಣಿಕೆಯಾ
ಕೊಡಲಾಗುವುದು.' ಎಂದು ಪ್ರಕಟಿಸಿದ. ಧನಿಕರು ದರಿದ್ರರೆಲ್ಲರೂ ತಮ
ಲ್ಲಿದ್ದ ಚಿಕ್ಕ ದೊಡ್ಡ ಅಲಂಕಾರಗಳನ್ನು ನೇತಾಜಿಯ ತಕ್ಕಡಿಯಲ್ಲಿಟ್ಟರು

## ಆಜಾದ ಹಿಂದ ಬ್ಯಾಂಕ

ರಂಗೂನದ ಪ್ರಸಿದ್ಧ ಮುಸ್ಲಿಂ ಕೋಟ್ಯಾಧೀಶನೊಬ್ಬ ನೇತಾಜಿ
ದರ್ಶನಕ್ಕೆ ಹೋಗಿದ್ದ.

"ನಾವೊಂದು 'ಆಜಾದ ಹಿಂದ ಬ್ಯಾಂಕ್ ಸ್ಥಾಪಿಸಬೇಕಾಗಿದೆ"
ನೇತಾಜಿ ಪ್ರಸ್ತಾವಿಸಿದ.

"ಬಂಡವಾಳ ಎಷ್ಟು ಬೇಕಾದೀತು?" ಕೊಟ್ಯಾಧೀಶ ಕೇಳಿದ.

"ಐವತ್ತು ಲಕ್ಷ!"

"ಇಷ್ಟೇ! ಇದೇನು ಮಹಾ! ನಾನು ಮೂವತ್ತು ಲಕ್ಷ ಕೊಡ
ತ್ತೇನೆ; ಉಳಿದ ಇಪ್ಪತ್ತು ಲಕ್ಷ ಕೂಡಿಸಿ ಕೊಡುತ್ತೇನೆ."

ಕೋಟ್ಯಾಧೀಶ ಶೆಟ್ಟಿ ಮಾತಿನಂತೆ ನಡೆದ. ೧೯೪೪ನೆಯ ಎಪ್ರಿಲಿನ
ಬ್ಯಾಂಕು ಸ್ಥಾಪಿತವಾಯಿತು. ೫೦ ಲಕ್ಷ ರೂಪಾಯಿಗಳ ಪಾಲುಗಳನ
ಶೇಖರಿಸಲಾಯಿತು. ಆ ಕಾಲದ ಬ್ರಹ್ಮೀ ಸರಕಾರದ ಕಾಯದೆಯ ಮೇರೆ
ಬ್ಯಾಂಕನ್ನು ನೋಂದಿಸಲಾಯಿತು. ಶಾಸನಾನುಸಾರವಾಗಿ 'ಆರ್ಟಿಕಲ

ಆಫ್ ಅಸೋಸಿಯೇಶನ್ಸ್' ಮುದ್ರಿತವಾಗಿದೆ. ಅದಕ್ಕೆ ಬ್ರಹ್ಮೀ ಸರ
ಕಾರದ ಕಂಪನಿ ರಜಿಸ್ಟ್ರಾರನ ಮುದ್ರೆಯೂ ಬಿದ್ದಿದೆ.

ವ್ಯವಸ್ಥಿತವಾಗಿ ಬ್ಯಾಂಕಿನ ಕಾರ್ಯ ಸಾಗಿತು. ಅದರ ಮೂರು ಶಾಖೆ
ಗಳೂ ಹುಟ್ಟಿದವು. ಶಾಂತತೆಯ ಕಾಲದಲ್ಲಿಯಂತೆಯೇ ಸಂಪೂರ್ಣ
ವ್ಯಾಪಾರಿ ಪದ್ಧತಿಯಿಂದ ವ್ಯವಹಾರ ನಡೆದಿತ್ತು. ಜನರ ಠೇವುಗಳನ್ನು
ಇಟ್ಟುಕೊಳ್ಳಲಾಗುತ್ತಿತ್ತು. ಆಜಾದ ಹಿಂದ ಸರಕಾರವು ಅಲ್ಲಿ ತನ್ನ
ಹೆಸರಿನಿಂದ ಹಣವನ್ನಿಟ್ಟಿತ್ತು. ಹುಂಡಿ-ಚೆಕ್ ಮೊದಲಾದವನ್ನು ಕೊಡು
ವುದು ತಕ್ಕೊಳ್ಳುವುದು ನಿಯಮಾನುಸಾರವಾಗಿ ನಡೆದಿದ್ದಿತು.

ಜಪಾನೀ ಸರಕಾರವು ರಂಗೂನನ್ನು ಬಿಟ್ಟಮೇಲೆ, ಬ್ರಿಟಿಶ್ ಸರ
ಕಾರವು ಬಂದಮೇಲೆ ಕೂಡ ಆಜಾದ ಹಿಂದ ಬ್ಯಾಂಕು ನಡೆದಿತ್ತು.
ಬ್ರಿಟಿಶ್ ಪ್ರಭುತ್ವದ ಪುನರಾರಂಭದ ಆ ಅವ್ಯವಸ್ಥಿತ ಸಮಯದಲ್ಲಿ
ಜನರಿಗೆ ಅನ್ನ ವಸ್ತ್ರಗಳ ನೆರವು ಈ ಬ್ಯಾಂಕಿನ ಮುಖಾಂತರ ಸಿಕ್ಕುತ್ತಿತ್ತು.
ಕೆನೆಯ ನಾಮಧಾರಿ ಬ್ರಹ್ಮೀ ಸರಕಾರದ ಹತ್ತಿರ ತನ್ನ ದಂಡಿಗೆ ವೇತನ
ಕೊಡಲು ಹಣವಿರಲಿಲ್ಲ. ಆಗ ಆಜಾದ ಹಿಂದ ಬ್ಯಾಂಕು ಆ ಸರಕಾರಕ್ಕೆ
ಐದು ಲಕ್ಷ ರೂಪಾಯಿಗಳನ್ನು ಕಾಣಿಕೆಯಾಗಿ ಕೊಟ್ಟಿತು.

ಬ್ರಿಟಿಶ್ ಸರಕಾರವು ೧೯೪೫ ನೆಯ ಮೇ ೧೯ಕ್ಕೆ ಈ ಬ್ಯಾಂಕನ್ನು
ವಶಪಡಿಸಿಕೊಂಡಾಗ ಮೂವತ್ತೈದು ಲಕ್ಷ ರೂಪಾಯಿ ಶಿಲ್ಕಿದ್ದಿತು.
ಖಾಸಗೀ ವ್ಯಕ್ತಿಗಳ ಇಡುಗಂಟನ್ನು ತಿರುಗಿಕೊಟ್ಟು ಬಿಡಲಾಗಿತ್ತು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಾಗಿ ವಿದ್ಯಾರಣ್ಯರು ಹೊನ್ನಿನ
ಮಳೆ ಸುರಿಸಿದರೆಂಬುದು ಒಂದು ಹಳೆಯ ಪವಾಡವೆಂಬಂತೆ ತೋರುವ
ನಮ್ಮನ್ನು, ನೇತಾಜಿ ಮಾತೃ ಭೂಮಿಯ ಬಿಡುಗಡೆಗಾಗಿ ತೋರಿಸಿದ
ಅದ್ಭುತ ಸತ್ಯ ದಂಗುಬಡಿಸುವುದೆಂದರೆ ಅತಿರಂಜಿತವಲ್ಲ.

ತನ್ನ ಆರ್ಥಿಕ ಸ್ಥಿತಿಯನ್ನು ಬಲಪಡಿಸುವುದಕ್ಕಾಗಿ, ಪ್ರಜೆಗಳ ಈ
ಸ್ವೇಚ್ಛಾದಾನದ ಹೊರತು, ತೆರಿಗೆಯನ್ನು ಎತ್ತಬೇಕೆಂದು ಆಜಾದ ಹಿಂದ
ಸರಕಾರವು ಯೋಜಿಸಿತ್ತು. ತೆರಿಗೆಯ ಪ್ರಮಾಣವನ್ನು ಪ್ರಜೆಗಳ ವಾರ್ಷಿಕ
ಲಾಭಕ್ಕನುಸಾರವಾಗಿ ನಿಶ್ಚಿತಗೊಳಿಸುತ್ತಿರಲಿಲ್ಲ; ಅವರ ಅಧೀನವಿರುವ
ಒಟ್ಟು ಸೊತ್ತಿನ ಇಂತಿಷ್ಟು ಅಂಶವೆಂದು ಗೊತ್ತಾಗಿತ್ತು. ಯಾರ ಸೊತ್ತು

ಎಷ್ಟೆಂಬುದನ್ನು ಗೊತ್ತುಪಡಿಸಲು ಪ್ರಮುಖ ವ್ಯಾಪಾರಿಗಳ ಸಮಿತಿ
ಯೊಂದರ ನೇಮಕವಾಗಿತ್ತು. ಪ್ರತಿಯೊಬ್ಬನ ಸೊತ್ತಿನ ಬೆಲೆಯನ್ನು
ಕಟ್ಟುವುದು, ಆ ಮೇರೆಗೆ ತೆರಿಗೆ ಕೂಡಿಸುವುದು ಈ ಸಮಿತಿಯ ಕೆಲಸ.
ಆ ತೆರಿಗೆಯನ್ನು ಹೇಗೆ ಸಲ್ಲಿಸುವುದು, ಎಷ್ಟು ಕಂತುಗಳಲ್ಲಿ ತೆರುವುದು
ಎಂಬುದನ್ನು ನಿರ್ಧರಿಸಲಾಗುತ್ತಿತ್ತು. ಆದರಂತೆ ಅವನು ತನ್ನ ತೆರಿಗೆಯ
ಹಣವನ್ನು ಆಜಾದ ಹಿಂದ ಬ್ಯಾಂಕಿನಲ್ಲಿ ತುಂಬುತ್ತಲಿದ್ದ. ಈ ತೆರಿಗೆ
ಹಿಂದೀ ಪ್ರಜೆಗೆ ಮಾತ್ರ ಅನ್ವಯಿಸಿತ್ತು; ಇತರರಿಂದ ತೆರಿಗೆ ತೆಗೆದು
ಕೊಳ್ಳುತ್ತಿರಲಿಲ್ಲ. ಎಷ್ಟೋ ಜನ ತೆರಿಗೆ ತಪ್ಪಿಸಿಕೊಳ್ಳುವುದಕ್ಕಾಗಿ ತಾವು
ಬ್ರಹ್ಮೀ ಪ್ರಜೆ ಎಂದು ಸಿದ್ಧಪಡಿಸುತ್ತಿದ್ದರು. ಅಂಥವರಿಗೆ ತೆರಿಗೆ ಕೂಡಿಸು
ತ್ತಿರಲಿಲ್ಲ. ಹಿಂದೀ ಪ್ರಜೆಯಾಗಿಯೂ ಕೊಡಲೊಪ್ಪದವನಿಂದ ಮಾತ್ರ
ಅವನ ಮನಸಿನ ವಿರುದ್ಧವಾಗಿ ವಸೂಲ ಮಾಡಲಾಗುತ್ತಿತ್ತು.

ಸರಕಾರದ ವೆಚ್ಚದಲ್ಲಿ ದಂಡಿನ ವೆಚ್ಚ ಮುಖ್ಯವಾದುದು. ಮದ್ದು
ಗುಂಡು ಹಾಗು ಶಸ್ತ್ರಾಸ್ತ್ರಗಳು, ಸಿಂಗಾಪುರ ಹಾಂಕಾಂಗ ಮೊದಲಾದ
ಕಡೆಗಳಲ್ಲಿ ಬ್ರಿಟಿಶ್ ಸೈನ್ಯಗಳು ಬಿಟ್ಟುಹೋದ ಶಸ್ತ್ರಾಸ್ತ್ರಗಳಿಂದ ದೊರೆ
ಯುತ್ತಿದ್ದವು. ವೆಚ್ಚವೆಂದರೆ, ದಂಡಿನವರ ವೇತನಕ್ಕಾಗಿ, ಆಹಾರಕ್ಕಾಗಿ,
ಇತರ ಖಾತೆಗಳವರ ವೇತನಕ್ಕಾಗಿ, ಪ್ರಕಾಶನ–ಪ್ರಚಾರಗಳಿಗಾಗಿ, ಔಷ
ಧಾಲಯಗಳಿಗಾಗಿ, ಶಿಕ್ಷಣ ಸಂಸ್ಥೆಗಳಿಗಾಗಿ.

## ೧೨ ಆಜಾದ ಹಿಂದ ಸೇನೆಯ ಅಂತರ್ವ್ಯವಸ್ಥೆ

ಸೇನೆಯಲ್ಲಿ ಜಾತಿಭೇದವನ್ನು ಕಿತ್ತೊಗೆಯಲಾಗಿತ್ತು. ಎಲ್ಲರೂ
ಬಾಂಧವರು, ಸ್ವಾತಂತ್ರ್ಯವೀರರು. ಜಾತಿ ಒಂದೇ—ವೀರಜಾತಿ. ಕೆಂಪು
ಕೋಟೆಯ ಹತ್ತಿರದ ಶಿಬಿರದಲ್ಲಿ ಸೆರೆಯಾಳಾಗಿದ್ದ ೮೦ ಜನ ಆಜಾದ
ಹಿಂದ ಅಧಿಕಾರಿಗಳನ್ನು ಕಾಣಲು ಪತ್ರಿಕಾ–ಪ್ರತಿನಿಧಿ ಮಂಡಲವೊಂದು
ಮೊನ್ನೆ ಮೊನ್ನೆ ಹೋಗಿತ್ತು. ಆಗ “ನಿಮ್ಮಲ್ಲಿ ಹಿಂದುಗಳೆಷ್ಟು, ಮುಸ್ಲಿಮ
ರೆಷ್ಟು, ಇತರರೆಷ್ಟು? ಎಂಬುದಾಗಿ ಆಜಾದ ಕೈದಿಗಳನ್ನು ಪ್ರಶ್ನಿಸಲಾಯಿ
ತಂತೆ. ಅದಕ್ಕವರು ಜಿಗುಪ್ಸೆ ಪಟ್ಟರಂತೆ. “ನೀವೇಕೆ ಹೀಗೆ ಎಣಿಸು
ತ್ತೀರಿ? ನಮಗಿದು ಹೊಳೆದುದೇ ಇಲ್ಲ?—“ಒಂದೇ ಅಡಿಗೆಯ ಒಂದೇ

ಆಹಾರವನ್ನು ನಾವೆಲ್ಲರೂ ಒಟ್ಟಾಗಿಯೇ ಉಣ್ಣುತ್ತಿದ್ದೆವು. ಕೆಲವೊಮ್ಮೆ ನಾವೆಲ್ಲರೂ ಒಟ್ಟಿಗೆ ತಿಂದ ಆಹಾರವನ್ನು ವಿಂಗಡಿಸುವುದಲ್ಲಾದರೆ ನೆನೆಸುವುದೂ ಕಷ್ಟ. "—"ಆಜಾದ ಹಿಂದ ಸೇನೆಯನ್ನು ಸೇರಲು ಹಿಂದುಗಳಷ್ಟು ಮುಸಲ್ಮಾನರಿಗೆ ಉತ್ಸಾಹವಿರಲಿಲ್ಲವೆಂದು ಯಾರಾದರೂ ಭಾವಿಸುತ್ತಿದ್ದರೆ ಅದು ಭ್ರಮೆ." ಎಂದು ಒಬ್ಬೊಬ್ಬನೂ ಒಂದೊಂದು ತೆರನಾಗಿ ಉತ್ತರವಿತ್ತನಂತೆ. ದೇಶಸೇವೆಯಲ್ಲಿ ಜಾತಿಭೇದವೆನ್ನೆಣಿಸುವವರಿಗೆ ಒಂದು ಪಾಠ ಈ ಉದಾಹರಣೆ. ಒಬ್ಬ ಮುಸ್ಲಿಂ ವೀರನು "ಜಿನ್ನಾ ಒಂದು ಕುತ್ತು" ಎಂದೂ ಉದ್ಗಾರ ತೆಗೆದನಂತೆ.

ಆಜಾದ ಹಿಂದ ಸೇನೆಯಲ್ಲಿ ಅಡಿಗೆಮನೆಯೊಂದೇ. ಜಾತ್ಯನ್ವಯವಾಗಿ ಬೇರೆ ಬೇರೆ ಇರಲಿಲ್ಲ. ಅಲ್ಲಿ ಶಾಕಾಹಾರ-ಮಾಂಸಾಹಾರಗಳೆರಡನ್ನೂ ಸಿದ್ಧಮಾಡಲಾಗುತ್ತಿತ್ತು. ಹಿಂದು, ಮುಸಲ್ಮಾನ, ಬ್ರಾಹ್ಮಣ, ಗೋರಖಪುರಿ ಭಯ್ಯಾ—ಎಲ್ಲರೂ ಒಂದೇ ಪಂಕ್ತಿಯಲ್ಲಿ ಊಟ ಮಾಡುತ್ತಿದ್ದರು. ಒಬ್ಬೊಬ್ಬನಿಗೆ ಒಂದೊಂದು ತಟ್ಟೆಯಿರುತ್ತಿತ್ತು. ಮೊದಲು ಅದರಲ್ಲಿ ಶಾಕಾಹಾರವನ್ನು ಬಡಿಸಲಾಗುತ್ತಿತ್ತು. ಬಳಿಕ ಬೇಕಾದವರಿಗೆ ಮಾಂಸಾಹಾರವನ್ನು ಬಡಿಸುತ್ತಿದ್ದರು. ಹೊಸ ಭರತಿಯ ಜನ ಸರತಿಯಂತೆ ಅಡಿಗೆ ಮಾಡುತ್ತಿದ್ದರು.

ಆಜಾದ ಹಿಂದದ ಧ್ವಜ 'ತಿರಂಗೀ ಝೇಂಡಾ.' ಕೊಂಚ ತಿದ್ದುಪಾಟ ಹೊಂದಿದ ರವೀಂದ್ರರ 'ಜನಮನಗಣ' ಗೀತ ಅವರ ರಾಷ್ಟ್ರಗೀತ. ಈ ಗೀತ ಅತ್ಯಂತ ಲೋಕಪ್ರಿಯವಾಯಿತು. ಹಿಂದು, ಮುಸ್ಲಿಂ, ಕ್ರೈಸ್ತ ಮೊದಲಾದ ಸಕಲ ಧರ್ಮಗಳ ಗಂಡುಸರು, ಹೆಂಗುಸರು, ಹುಡುಗರು ಎಲ್ಲರೂ ಈ ಗೀತವನ್ನು ಉತ್ಸಾಹದಿಂದ, ಭಕ್ತಿಭಾವದಿಂದ ಈಗಲೂ ಹಾಡುತ್ತಾರೆ.

'ಜಯ ಹಿಂದ' ಎಂಬುದು ಅವರ ವಂದನ ಘೋಷ. 'ವಂದೇ ಮಾತರಂ' 'ರಾಮ ರಾಮ' ಅಥವಾ 'ಖುದಾ ಹಫೀಜ'ಗಳ ಬದಲು ಎಲ್ಲರೂ 'ಜಯ ಹಿಂದ' ಎನ್ನುತ್ತಿದ್ದರು: ಈಗಲೂ ಎನ್ನುತ್ತಾರೆ, ಬರೆಯುತ್ತಾರೆ. 'ಜಯ ಹಿಂದ' ಎಂದು ಉಚ್ಚರಿಸಿದೊಡನೆ, ಎನ್ನುವವನೂ ಕೇಳುವವನೂ 'ಹುಶ್ಯಾರ' ಲಷ್ಕರೀ ಬಂಗಿಯಲ್ಲಿ ಸಿದ್ಧರಾಗುತ್ತಾರೆ.

ಈ ಸೂತ್ರದ ರೋಮಾಂಚಕಾರಿಯಾದ ಪರಿಣಾಮಕಾರಕತೆ ಪ್ರೇಕ್ಷಕನನ್ನು ಗುಂಗು ಹಿಡಿಸಿಬಿಡುತ್ತದೆ.

ಆಜಾದ ಹಿಂದ ಸರಕಾರದ ಭಾಷೆ ಹಿಂದುಸ್ತಾನಿ, ಲಿಪಿ ರೋಮನ್. ಸೈನ್ಯದ ಶಿಕ್ಷಣ, ಆಜ್ಞೆ ಮೊದಲಾದುವೆಲ್ಲ ಹಿಂದುಸ್ತಾನಿಯಲ್ಲಿ.

## ಆಜಾದ ಹಿಂದ ಲೀಗಿನ ಸಮಾಜ ಸೇವೆ

ಆಜಾದ ಹಿಂದ ಲೀಗು ಭಾರತ ಸ್ವಾತಂತ್ರ್ಯಕ್ಕಾಗಿ ಜನ್ಮವೆತ್ತಿದ ರಾಜಕೀಯ ಸಂಘಟನೆ. ಅದು ರಾಜಕೀಯದೊಡನೆ ಎಷ್ಟೋ ಜನತಾ ಸೇವೆಯ ಕಾರ್ಯಗಳನ್ನೂ ಮಾಡಿತು. ಯುದ್ಧ ಪರಿಸ್ಥಿತಿಯ ಮೂಲಕ ಕಂಗಾಲರಾದ ಎಷ್ಟೋ ಭಾರತೀಯರ ಸಹಾಯಕ್ಕಾಗಿ ದೊಡ್ಡ ನಿಧಿಯ ಸಹಾಯ ನೀಡಿತು. ಮಲಯದಲ್ಲಿ ವಿಶೇಷವಾಗಿ ಕೂಲಿಕಾರರು ಅತ್ಯಂತ ದೈನ್ಯಾವಸ್ಥೆಗಿಳಿದಿದ್ದರು. ಲೀಗಿನ ಅನೇಕ ಶಾಖೆಗಳು ಅವರಿಗಾಗಿ ಡಾಕ್ಟರರನ್ನು ನಿಯಮಿಸಿದ್ದವು. 'ಪರಿಹಾರ ಕೇಂದ್ರಗಳನ್ನು ತೆರೆದಿದ್ದವು; ಈ ಕೇಂದ್ರಗಳು ಎಲ್ಲರಿಗೂ ಅನ್ನ ಔಷಧಗಳನ್ನು ಉಚಿತವಾಗಿ ಒದಗಿಸುತ್ತಿದ್ದವು. ಕ್ವಾಲಾಲಪುರದ ಪರಿಹಾರ ಶಿಬಿರ ಮಲಯದಲ್ಲಿ ಎಲ್ಲಕ್ಕೂ ದೊಡ್ಡದು. ಒಂದು ಕಾಲದಲ್ಲಿ ದಿನವೂ ಸರಾಸರಿ ಒಂದು ಸಾವಿರ ಜನರಿರುತ್ತಿದ್ದರು. ಈ ಕ್ಯಾಂಪಿನ ತಿಂಗಳ ಸರಾಸರಿ ವೆಚ್ಚ ೭೫೦೦೦ ಡಾಲರು. ಬ್ರಹ್ಮದೇಶದಲ್ಲಿಯೂ ಅನೇಕ ಧರ್ಮಾರ್ಥ ಔಷಧಾಲಯಗಳಿದ್ದವು. ಥಾಯಲಂಡದಲ್ಲಿ ಸಾಧಾರಣಮಟ್ಟಿಗೆ ಸುಸಜ್ಜಿತವಾದ ಆಸ್ಪತ್ರೆಯಿತ್ತು. ಮಿತ್ರರ ಬಾಂಬು ದಾಳಿಗೆ ಅದು ಆಹುತಿಯಾಯಿತು.

ಭಾರತೀಯರ ದುಃಸ್ಥಿತಿಯನ್ನು ಹೋಗಲಾಡಿಸುವ ಯೋಜನೆಯನ್ನು ಕೈಕೊಂಡಿತ್ತು ಲೀಗು. ಈ ಕೆಲಸ ಆದುದು ಮುಖ್ಯತಃ ಮಲಯದಲ್ಲಿ. ಸುಮಾರು ಎರಡು ಸಾವಿರ ಎಕರೆ ಅಡವಿಯನ್ನು ಸವರಲಾಯಿತು, ಆ ಭೂಮಿಯನ್ನು ಭಾರತೀಯ ನಾಗರಿಕರಿಗೆ ಹೊಲ-ಗದ್ದೆಗಳಿಗಾಗಿ ಕೊಡಲಾಯಿತು. ಬ್ರಿಟಿಶ್ ಸರಕಾರವು ಈ ದತ್ತಿಯನ್ನು ನಡೆಸಿಕೊಡುವುದೇನೋ ನೋಡಬೇಕು.

ಲೀಗಿನ ಶೈಕ್ಷಣಿಕ ಕಾರ್ಯವೂ ಉಲ್ಲೇಖನೀಯ. ಇದರ ಆಳಿಕೆಯ ಮೂರೇ ಮೂರು ವರ್ಷಗಳಲ್ಲಿ, ಪೂರ್ವ ಏಶಿಯಾದಲ್ಲಾದಷ್ಟು ಹಿಂದುಸ್ತಾನೀ ಶಿಕ್ಷಣದ ಪ್ರಗತಿ, ಆ ಹಿಂದಿನ ಎಲ್ಲ ವರ್ಷಗಳಲ್ಲಿಯೂ ಆಗಿರಲಿಲ್ಲ. ಎಲ್ಲ

ಪ್ರದೇಶಗಳಲ್ಲಿಯೂ ಲೀಗಿನ ರಾಷ್ಟ್ರೀಯ ಶಾಲೆಗಳು ನಡೆದಿದ್ದವು. ಬ್ರಹ್ಮ ದೇಶವೊಂದರಲ್ಲಿಯೇ ಲೀಗಿನ ಮೇಲ್ವಿಚಾರಣೆಯಲ್ಲಿ ಅರುವತ್ತೈದು ಭಾರತೀಯ ವಿದ್ಯಾಲಯಗಳಿದ್ದವು.

## ೧೩ ಆಜಾದ ಹಿಂದದ ಅಸ್ತದ ಅನಂತರ

೧೯೪೨ ರಲ್ಲಿ ಬ್ರಿಟಿಶರು ಬ್ರಹ್ಮದೇಶದಿಂದ ಕಾಲ್ದೆಗೆದಾಗಿನ ಪರಿಸ್ಥಿತಿಗೂ ಪುನಃ ಅವರು ಪ್ರವೇಶಿಸಿದಾಗಿನ ಪರಿಸ್ಥಿತಿಗೂ ಇದ್ದ ವ್ಯತ್ಯಾಸವು ಗಮನಾರ್ಹವಾಗಿದೆ. ಬ್ರಿಟಿಶರು ಹೊರಟು ಹೋದಾಗ ಬ್ರಹ್ಮದೇಶದಲ್ಲಿ ಭಾರತೀಯರ ಕೊಲೆ, ಅವರ ವಿತ್ತದ ಸೂರೆ-ಸುಲಿಗೆ ಮೊದಲಾದ ಅತ್ಯಾಚಾರಗಳು ಮಿತಿಮೀರಿದ್ದವು. ಆ ಕಾಲದ ನೆನಪಾದರೆ ಅಲ್ಲಿಯ ಭಾರತೀಯರ ಮೈಮೇಲೆ ಈಗಲೂ ಮುಳ್ಳು ಬರುತ್ತವೆ. ಆಗಿನ ಭಯಂಕರ ಪ್ರಸಂಗವನ್ನು ಉಸಿರುವಾಗ ಅವರ ದನಿ ನಡುಗುತ್ತದೆ. ೧೯೪೫ ರಲ್ಲಿ ಬ್ರಿಟಿಶರು ಪುನಃ ಆಕ್ರಮಿಸಿದ ಮೇಲೆ ಮೊದಲನೆಯ ದರೋಡೆಯಾಯಿತು.

ಬ್ರಿಗೇಡಿಯರ್ ಲಾಡರ್ ಎಂಬವರು ರಂಗೂನ ವಿಭಾಗದ ಕಮಾಂಡರರಾಗಿದ್ದರು. ೧೯೪೫ ಮಾರ್ಚ ೫ ನೆಯ ದಿನ ಅವರ ವಿನಂತಿಯ ಮೇರೆಗೆ ಕೆಲವರು ಆಜಾದ ಹಿಂದ ಲೀಗೆಂದರೇನೆಂಬುದನ್ನು ವಿವರಿಸಿದರೆಂದು ಮೇಜರನು ಹೇಳಿದ. ರಾಜಕಾರಣದ ಹೊರತು ಇತರ ಕಾರ್ಯಗಳನ್ನು ಲೀಗು ಮುಂದುವರಿಸಲಿ; ಹಿಂದುಸ್ತಾನದಲ್ಲಿ ಕಾಂಗ್ರೆಸ್ಸೂ ಸರಕಾರವನ್ನು ಸಹಕರಿಸದಿದ್ದರೂ ಜನತಾ-ಸೇವೆಯನ್ನು ನಡೆಯಿಸಿದೆ ಎಂದೂ ಆತ ಹೇಳಿದ. ಲೀಗು ಈ ಸೂಚನೆಯನ್ನೊಪ್ಪಿತು. ರಂಗೂನಿನಲ್ಲಿ ಲೀಗು ನಡೆಯಿಸುತ್ತಿದ್ದ ಐದು ಧರ್ಮಾರ್ಥ ರುಗ್ಣಾಲಯಗಳನ್ನು ತಿರುಗಿ ಒಪ್ಪಿಸುವುದಾಗಿಯೂ ಅದಕ್ಕಾಗಿ ಔಷಧದ ಮತ್ತು ಹಣದ ಸಹಾಯವನ್ನು ನೀಡುವುದಾಗಿಯೂ ಬ್ರಿಗೇಡಿಯರ್ ಸೂಚಿಸಿದ. ಆದರೆ ಲೀಗು ಆ ಸಹಾಯವನ್ನು ಸ್ವೀಕರಿಸಲಿಲ್ಲ.

ಮೇ ೨೮ ಕ್ಕೆ ಲೀಗು ಅಸ್ತವಾಯಿಯು. ಆಗ ವ್ಯವಸ್ಥಿತ ದಬ್ಬಾಳಿಕೆಯ ಆರಂಭಮಾತ್ರವಾಗಿದ್ದಿತು. ಆಜಾದ ಹಿಂದ ಚಳವಳಿಗೆ ಎಳ್ಳಷ್ಟು ಸಂಬಂಧವುಳ್ಳ ಪ್ರತಿಯೊಬ್ಬನನ್ನೂ ಹಿಡಿಯಲಾಯಿತು. ಫೀಲ್ಡ ಸೆಕ್ಯುರಿಟಿ ಸರ್ವಿಸಿನ ಅಧಿಕಾರಿ, 'ಒಂದೈದು ನಿಮಿಷ ಬಂದು ಹೋಗಿ' ಎಂದು ಯಾವನೊಬ್ಬನನ್ನು ಕರೆಸುವುದು, ಅವನನ್ನು ಬಂಧಿಸಿ ಫೀಲ್ಡ ಇಂಟರೊ

ಗೇಟಿಂಗ್ ಯುನಿಟಿನ ಅಧಿಕಾರಿಗೆ ಒಪ್ಪಿಸುವುದು-ಬಟ್ಟೆ ಬದಲಿಸುವುದಕ್ಕೂ ಅವಕಾಶ ಕೊಡಲಿಕ್ಕಿಲ್ಲ—ಇದು ಸೆರೆಹಿಡಿಯುವ ರೀತಿ. ವಿಚಾರಣೆ ಮುಗಿಸುವುದಕ್ಕೆ ಫೀ. ಇಂ. ಯುನಿಟಿಗೆ ಎಷ್ಟೋ ದಿನ ಹಿಡಿಯುತ್ತಿದ್ದವು. ಆ ವರೆಗೆ ಆ ಸಂಶಯಿತ ವ್ಯಕ್ತಿಯನ್ನು ರಂಗೂನ ಸೆಂಟ್ರಲ್ ಜೇಲಿನಲ್ಲಿ ಇಡುತ್ತಿದ್ದರು. ಅಲ್ಲಿ ಹಾಸಿಕೊಳ್ಳುವುದಕ್ಕೆ ಚಾಪೆಯಾಗಲಿ ಹೊದ್ದುಕೊಳ್ಳುವುದಕ್ಕೆ ಬಟ್ಟೆಯಾಗಲಿ ಇರಲಿಲ್ಲ.

ಕೆಲವರನ್ನು ಕೇಳಿಯಾಡಿ ಬಿಟ್ಟುಬಿಡುತ್ತಿದ್ದರು. ಮತ್ತೆ ಕೆಲವರನ್ನು ಹಾಗೇ ಕೆಲದಿನ ಸೆರೆಯಲ್ಲಿಟ್ಟು ಬಿಡುಗಡೆ ಮಾಡುತ್ತಿದ್ದರು. ಆದರವರ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದರು. ಕೆಲವರಿಗೆ ದೈನಂದಿನ ಹಾಜರಿ ವಿಧಿಸಿದ್ದುಂಟು. 'ಝಾಂಸಿ ರಾಣಿ ಪಥಕ'ದ ಒಬ್ಬ ಭಾರತೀಯ ಕನ್ಯೆಗೆ ನಿತ್ಯ ಪೋಲೀಸ್ ಭೇಟಿ ಹತ್ತಿದೆ, ಕೆಲವರನ್ನು ದೂರ ಒಯ್ಯಲಾಗಿದೆ, ಹಿಂದುಸ್ತಾನಕ್ಕೂ ತಂದಿರಬಹುದಾಗಿದೆ. ಎಷ್ಟೋ ಮಂದಿಗೆ ಖಟ್ಲೆ ಹಾಕದೆ ಬೇರೆ ಅವಧಿಯ ಶಿಕ್ಷೆಯನ್ನೂ ವಿಧಿಸಲಾಗಿದ್ದು, ಅವರು ಸದ್ಯ ಇನ್ಸೈನ್‌ಯಲ್ಲಿದ್ದಾರೆ.

ಆಜಾದ ಹಿಂದ ಸೇನೆಯ ವಿಷಯದಲ್ಲಿ ಮೊದಮೊದಲು ಬ್ರಿಟಿಶರು ಇದೇ ಧೋರಣೆ ತಳೆದಿದ್ದರು. ಇದರಲ್ಲಿಯ ಸೈನಿಕರನ್ನು ಹಿಂದುಸ್ತಾನಕ್ಕೆ ಹೋಗಗೊಡಲಾಗುವುದೆಂದು ಬ್ರಿಗೇಡಿಯರನು ಹೇಳಿದ. ಇವರೂ ಮುಂಚೆ ಬ್ರಿಟಿಶ್ ಹಿಂದೀ ಸೈನ್ಯದಲ್ಲಿದ್ದವರೂ ಸೈನಿಕ ಉಡಿಗೆ-ತೊಡಿಗೆ ಕಳಚಿ ಮೊದಲಿನ ಉಡಿಗೆ-ತೊಡಿಗೆ ಧರಿಸಬಹುದೆಂದು ಮೇಜರ್ ಜನರಲ್ಲನು ಒಪ್ಪಿಕೊಂಡ. ಸಾರ್ವಜನಿಕ ಸ್ವಚ್ಛತೆ ಮೊದಲಾದವುಗಳಿಗಾಗಿ ಆಜಾದ ಹಿಂದ ಸೈನಿಕರಿಗೆ ಕೆಲಸ ಹೇಳಲಾಗುವುದೆಂದೂ ಅವರೊಂದಿಗೆ ಅಷ್ಟೇ ಬ್ರಿಟಿಶ್ ಹಿಂದೀ ಸೈನಿಕರಿರುವುದಾಗಿಯೂ ಬ್ರಿಗೇಡಿಯರ್ ಆಶ್ವಾಸನವಿತ್ತ. ಆಜಾದ ಹಿಂದ ಸೇನೆಯ ಕ್ಯಾಂಪಿನ ವ್ಯವಸ್ಥೆಯನ್ನು ಅವರಿಗೇ ವಹಿಸಿಕೊಡುವುದು, ಅವರು ತಮ್ಮ ಧ್ವಜವನ್ನು—ಭಾರತೀಯ ರಾಷ್ಟ್ರಧ್ವಜ—ಹಾರಿಸಬಹುದು, ತಮ್ಮ ರಾಷ್ಟ್ರಗೀತವನ್ನು ಹಾಡಬಹುದು. ಇವು ಆರಂಭದ ವಚನಗಳು.

ಆದರೆ ನಿಃಶಸ್ತ್ರೀಕರಣವನ್ನು ಪೂರ್ಣಗೊಳಿಸಿದ ಬಳಿಕ, ಆಜಾದ ಹಿಂದ ಸೈನಿಕರನ್ನು ಒತ್ತಟ್ಟಿಗೆ (ರಂಗೂನ ಸೆಂಟ್ರಲ್ ಜೇಲ್) ಕಳೆಹಾಕಿದ

ಬಳಿಕ ಬ್ರಿಟಿಶರ ಧೋರಣೆ ಬದಲಾಯಿತು. ಆ. ಹಿಂ. ಸೈನ್ಯದ ಕಾವಲು ಗಾರರ ಬದಲು ಬ್ರಿಟಿಶ್ ಗಾರ್ಡರು ಬಂದರು. ಬೀದಿಗಳನ್ನು ಉಡುಗುವು ದಕ್ಕೆ ಒತ್ತಾಯಪಡಿಸಲಾರಂಭಿಸಿದರು. ಈ ಕೆಲಸ ಬ್ರಿ. ಹಿಂದೀ ಸೈನಿಕರ ಮೇಲ್ವಿಚಾರಣೆಯಲ್ಲಿ ನಡೆಯತೊಡಗಿತು. ವರಿಷ್ಠ ಅಧಿಕಾರಿಗಳನ್ನು ಹಿಂದುಸ್ತಾನಕ್ಕೆ ತರಲಾಯಿತು. ಉಳಿದವರು ಅಲ್ಲಿಯೇ ಇದ್ದಾರೆ.

ಮಲಯ, ಥಾಯಲಂಡ್ ಮತ್ತು ಇತರ ಕಡೆಗಳಲ್ಲಿ ಲೀಗನ್ನೂ ಅದರ ಸೈನಿಕರನ್ನೂ ಬ್ರಿಟಿಶರು ಯಾವರೀತಿ ನಡೆಸಿಕೊಂಡರೆಂಬುದಿನ್ನೂ ತಿಳಿದಿಲ್ಲ. ಆದರೂ ಇದೇ ರೀತಿ ಇರಬಹುದು.

## ೧೪ ಕೊನೆಯ ಮಾತು

ಪೂರ್ವ ಏಶಿಯದ ತುಂಬ ಶಾಖೋಪಶಾಖೆಗಳಾಗಿ ಹಬ್ಬಿದ 'ಸ್ವತಂತ್ರ ಭಾರತ ಸಂಘ'ದ, ಪ್ರಭಾವಶಾಲಿಯಾಗಿ ಹೋರಾಡಿದ 'ತಾತ್ಪೂರ್ತಿಕ ಸ್ವತಂತ್ರಭಾರತ ಸರಕಾರ'ದ ಮತ್ತು ಸ್ವತಂತ್ರ ಭಾರತಸೇನೆಯ ಹುಟ್ಟು, ಬೆಳೆವಣಿಗೆ, ಆಳಿಕೆ, ಅಳಿವುಗಳ ಇತಿಹಾಸ ಇಂತಿದೆ. ಇವು ಮೂರೂ ಯಾವ ಪರಕೀಯ ಸತ್ತೆಯ ಕೈಗೊಂಬೆಗಳೂ ಆಗದೆ, ಆಗಾಗ ಜಪಾನಿಗಳ ಹಸ್ತಕ್ಷೇಪವನ್ನು ಪ್ರತಿಭಟಿಸುತ್ತ, ಭಾರತದ ಸಂಪೂರ್ಣ ಸ್ವಾತಂತ್ರ್ಯದ ಧ್ಯೇಯಕ್ಕೆ ಕುಂದುಬಾರದಂತೆ ಕಂಟಕವಾಗದಂತೆ ಜಪಾನದ ಸಹಾಯ ವನ್ನು ಪಡೆಯುವಲ್ಲಿ ಜಾಗ್ರತೆ ವಹಿಸಿ, ವಿಶೇಷವಾಗಿ ಆತ್ಮವಿಶ್ವಾಸ, ಸಾಹಸ, ಶೌರ್ಯಗಳ ಅವಲಂಬನದಿಂದಲೇ ಈ ಹೋರಾಟವನ್ನು ನಡೆಸಿದ್ದವೆಂಬುದು ಇದರಿಂದ ಸ್ಪಷ್ಟವಾಗದಿರದು.

ಉದ್ದೇಶ ಸಿದ್ಧಿಯಾಗದಿದ್ದರೂ ಈ ಚಳವಳಿಯಿಂದ ಅಲ್ಲಿಯ ಚಹಾ ತೋಟಗಳಲ್ಲಿ ದುಡಿಯುತ್ತಿರುವ ಹಿಂದೀ ಕೂಲಿಕಾರನಿಗೆ ಕೂಡ ತಾನು ಭಾರತೀಯನಾದುದಕ್ಕಾಗಿ ಅಭಿಮಾನವೆನಿಸುತ್ತಿದೆ. ಇಂಗ್ಲಿಷರು ಕಣ್ಣು ಕೆಕ್ಕರಿಸಿದರೆ ಪ್ರತಿಯಾಗಿ ಕಣ್ಣುಕೆಕ್ಕರಿಸುವ ಧೈರ್ಯ ಅವರಿಗೆ ಬಂದಿದೆ. ಪೂರ್ವ ಏಶಿಯದ ಭಾರತೀಯ ಜನತೆಯಲ್ಲಿ ಅಪೂರ್ವ ಪ್ರಚಂಡ ಜಾಗ್ರತಿ ಯುಂಟಾಗಿದೆ. 'ಜಯ ಹಿಂದ' ಎಂಬ ಅವರ ಘೋಷಣೆ ಜಾಗ್ರತಿಯ ದ್ಯೋತಕವಾಗಿದೆ. ಅಲ್ಲದೆ, ಹಿಂದುಸ್ತಾನದಲ್ಲಿಯ ಭಾರತೀಯರ ದೇಶಾಭಿ ಮಾನ ಉತ್ಸಾಹಗಳನ್ನು ಕೂಡ ಶತಗುಣವಾಗಿ ಹೆಚ್ಚಿಸಿದೆ.

## ಹಿಂದುಸ್ತಾನ ಸರಕಾರದ ಲೆಕ್ಕ ಮತ್ತು ಧೋರಣೆ

ಆಜಾದ ಹಿಂದ ಫೌಜಿನ ಕುರಿತು ೧೯೪೫ ನವೆಂಬರ್ ೩೦ಕ್ಕೆ ಹಿಂದುಸ್ತಾನ ಸರಕಾರದ ಪ್ರಕಟನೆಯೊಂದು ಹೊರಟಿದೆ. ಎಲ್ಲವನ್ನೂ ಪರ್ಯಾಲೋಚಿಸಿ ಆ ಸೈನಿಕರಲ್ಲಿ ನಿರಪರಾಧಿಗಳೆಷ್ಟು, ಕ್ಷಮಾರ್ಹ ಅಪರಾಧಿಗಳೆಷ್ಟು, ಸೌಮ್ಯ ಅಪರಾಧಿಗಳೆಷ್ಟು, ಅನಿವಾರ್ಯವಾಗಿ ಕಟ್ಟಳೆಗೆ ಗುರಿಪಡಿಸಲೇ ಬೇಕಾದವರೆಷ್ಟು ಎಂಬುದನ್ನು ಸರಕಾರವು ಅಂದಾಜು ಲೆಕ್ಕ ಮಾಡಿ ಕೊಟ್ಟದೆ. ಈ ಪರಿಶೀಲನೆಯಲ್ಲಿ ಸರಕಾರವು ವಿಶೇಷ ದಯೆ—ಔದಾರ್ಯ ದೃಷ್ಟಿಯಿಂದಲೇ ನೋಡಿ ಕೆಲವರಿಗೆ ಸೌಮ್ಯ ಪ್ರಾಯಶ್ಚಿತ್ತ ಕೊಡಲಾಗುವುದೆಂದು ಹೇಳಿದೆ. ಕೇವಲ ಅತ್ಯಲ್ಪ ಮಂದಿಯ ಬಗ್ಗೆ, ಯುದ್ಧ ಕೈದಿಗಳಾಗಿದ್ದ ಅಥವಾ ಆಜಾದ ಹಿಂದ ಫೌಜದ ಸದಸ್ಯರಾಗಿದ್ದ ತಮ್ಮ ದೇಶಬಾಂಧವರ ಕೊಲೆಯೇ ಮೊದಲಾದ ಪಾಶವೀ ಕೃತ್ಯಗಳನ್ನು ಮಾಡಿದ್ದರೆಂಬುದಕ್ಕೆ ರುಜುವಾತುಗಳಿರುವಾಗ ವಿಚಾರಣೆಗೆಳೆಯದೆ ಬಿಡುವುದು ಸರಕಾರದ ತಪ್ಪಾಗುವುದು. ಆದುದರಿಂದ ಈ ನಿರ್ಧಾರವನ್ನು ಸಾರ್ವಜನಿಕರು ಸಮರ್ಥಿಸುವರೆಂದು ಸರಕಾರ ನಂಬಿದೆ. ಇಂತಹರ ಸಂಖ್ಯೆ ೫೦ ಕ್ಕೂ ತಲುಪಲಿಕ್ಕಿಲ್ಲ, ಇಪ್ಪತ್ತೇ ಆದರಾಗಬಹುದು.

ಸರಕಾರದ ಲೆಕ್ಕದ ತಾಳೆ ಇಂತಿದೆ—ಹಿಂದೀ ಸೈನ್ಯದ ಸುಮಾರು ೬೦ ಸಾವಿರ ಮಂದಿ ಕೊನೆತನಕ ಆಜಾದ ಹಿಂದ ಫೌಜಿಗೆ ಸೇರದೆ ಹಿಂದೀ ಸರಕಾರದ ವಿಧೇಯತಾ ಪ್ರತಿಜ್ಞೆಯನ್ನು ಕಾಪಾಡಿದರು. ಆ. ಹಿ. ಫೌಜಿಗೆ ಸೇರಿದುದು ೨೦ ಸಾವಿರ ಜನ. ೬೦೦೦ ಮಂದಿ ಭಾರತಕ್ಕೆ ಇನ್ನೂ ಬಂದಿಲ್ಲ (ಅವರಲ್ಲಿ ೧೦೦೦ ಜನ ಸಿಕ್ಕೇ ಇಲ್ಲ). ಇಲ್ಲಿದ್ದ ೧೪೦೦೦ ಜನರಲ್ಲಿ ೨೫೦೦ ಜನರು ವೈರಿಗೆ ಸಹಾಯಕರಂತೆ ನಟಿಸಿ ಪುನಃ ತಮ್ಮ ಮೂಲ ಸೇನೆಗೆ ಸೇರಿದ್ದರಿಂದ ದೋಷಮುಕ್ತರು. ಉಳಿದ ೧೧೫೦೦ ಜನರಲ್ಲಿ ೬೦೦೦ ಮಂದಿ ಪರಿಸ್ಥಿತಿ ವಶದಿಂದ, ವೈರಿಗಳ ಪ್ರಚಾರಕ್ಕೆ ಮನಸೋತು, ಹಿಂಸೆಯಿಂದೊಪ್ಪಿ ಆ. ಹಿಂ. ಸೇನೆ ಸೇರಿದರು. ಇವರು ನಮ್ಮ ಸೇನೆಯನ್ನೆದುರಿಸಿ ಕಾದುತ್ತಿದ್ದ ಅವಧಿಯಲ್ಲಿಯೂ ಇವರ ಕುಟುಂಬದವರಿಗೆ ವೇತನ ಸಲ್ಲಿಸಿದ್ದುಂಟು. ಅದಕ್ಕೆ ಇನ್ನುಮೇಲೂ ಮುಟ್ಟುಗೋಲು ಹಾಕುವುದಿಲ್ಲ. ಈ ಸೈನಿಕರಿಗೆ ವೈರಿಯು ಕೈಯಿಂದ ತಪ್ಪಿದ ದಿನದಿಂದ ಮತ್ತೊಂದ

೪೨ ದಿನಗಳ ಸವೇತನ ರಜೆಕೊಟ್ಟು ಅವರವರ ಹಳ್ಳಿಯಲ್ಲಿ ವಾಸಮಾಡುವದಕ್ಕೋ ಬೇರೆ ಉದ್ಯೋಗ ಹುಡುಕುವುದಕ್ಕೋ ಅನುಕೂಲ ಮಾಡಿಕೊಡಲಾಗುವುದು. ಉಳಿದ ೫೫೦೦ ಜನರಲ್ಲಿ ೩೮೦೦ ಜನ ಭಾರತವನ್ನಾಕ್ರಮಿಸುವಂತೆ ಜಪಾನರಿಗೆ ಸಹಾಯ ಮಾಡಬೇಕೆಂಬ ಸ್ಪಷ್ಟ ಉದ್ದೇಶದಿಂದಲೇ ಆಕಡೆ ಸೇರಿದ್ದರೆಂದು ನಂಬಲಾಗಿದೆ. ಅವರಲ್ಲಿ ಬಹುಸಂಖ್ಯಾಕರಿಗೆ ಜಪಾನರು ಭಾರತವನ್ನಾಕ್ರಮಿಸಿದರೆ ಎಂತಹ ದುರಂತವಾಗುತ್ತಿತ್ತೆಂಬ ಅರಿವೇ ಇರಲಿಲ್ಲ. ಅವರನ್ನು ಸೇನೆಯಿಂದ ತೆಗೆದು ಹಾಕಲಾಗುವುದು. ಅವರ ಸಂಬಳವನ್ನು ಜಪ್ತಮಾಡಲಾಗುವುದು. ಆದರೆ ಅವರ ಕುಟುಂಬಗಳಿಗೆ ಕೊಟ್ಟಿದ್ದ ವೇತನವನ್ನು ಕಸಿದುಕೊಳ್ಳಲಾಗುವುದಿಲ್ಲ. ಮಿಕ್ಕ ೧೭೦೦ ಮಂದಿಯ ಪ್ರಾಥಮಿಕ ವಿಚಾರಣೆ ಮುಗಿದಿಲ್ಲ. ಕೋರ್ಟ್ ಮಾರ್ಶಲ್ ವಿಚಾರಣೆಗೆ ಗುರಿಪಡಿಸುವುದು ೨೦ ಜನರನ್ನಾದೀತು; ಹೆಚ್ಚೆಂದರೆ ಐವತ್ತೇನಾಗುವುದಿಲ್ಲ.

## ಕೆಂಪು ಕೋಟೆಯಲ್ಲಿ

"ಲಾಲ ಕೀಲೆ ಗಾಢಕೇ ಲಹರಾಯೇ ಜಾ" ಎಂದು ಹಾಡುತ್ತ ದಿಲ್ಲೀ ಮುತ್ತಿಗೆಗಾಗಿ ಹೊರಟಿತ್ತು ಆಜಾದ ಹಿಂದ ಫೌಜು. ಅದು ಅಯಶಸ್ವಿಯಾಗಿ ಅದೇ ಕೆಂಪು ಕೋಟೆಯಲ್ಲಿ ಆ ಫೌಜಿನ ಅಧಿಕಾರಿಗಳು ಆರೋಪಿಗಳಾಗಿ ನಿಂತಿದ್ದರು. ಕ್ಯಾ. ಶಹಾನವಾಜ, ಕ್ಯಾ. ಪಿ. ಕೆ. ಸೈಗಲ ಮತ್ತು ಲೆ. ಜಿ. ಎಚ್. ಧಿಲನ ಈ ಮೂವರ ವಿಚಾರಣೆ ೫–೧೧–೧೯೪೫ ನೆಯ ದಿನ ಆರಂಭವಾಯಿತು.

ಇಂಡಿಯನ್ ಪಿನಲ್ ಕೋಡಿನ ೧೨೧ ನೆಯ ಕಲಮಿನನ್ವಯ ಚಕ್ರವರ್ತಿಗಳ ವಿರುದ್ಧ ಯುದ್ಧ ಹೂಡಿದ ಮತ್ತು ಕೆಲ ಹಿಂದೀ ಸೈನಿಕರನ್ನು ಕೊಲೆ ಮಾಡಿದ ಅಥವಾ ಕೊಲೆಗೆ ನೆರವಾದ ಆರೋಪಗಳು ಇವರ ಮೇಲಿದ್ದವು.

ವಿಚಾರಣೆಗಾಗಿ ಏಳು ಜನರ ನ್ಯಾಯಮಂಡಲವು ನಿಯಮಿತವಾಗಿತ್ತು. ೧. ಮೇ. ಜ. ಬಿ. ಎ. ಬಕ್ಸಲ್ಯಾಂಡ್ (ಅಧ್ಯಕ್ಷ), ೨. ಬ್ರಿ. ಎ. ಜೆ. ಎಚ್. ಬರ್ಕ, ೩. ಲೆ. ಕ. ಸಿ. ಆರ್. ಸ್ಕಾಟ್, ೪. ಲೆ. ಕ. ಟಿ. ಆಯ್. ಸ್ಟಿವನ್ಸನ್, ೫. ಲೆ. ಕ. ನಾಸೀರ ಅಲಿಖಾನ, ೬. ಮೇ. ಪ. ಪ್ರಿತ್ರಮ ಸಿಂಹ, ೭. ಶ್ರೀ. ಬನ್ವಾರಿಲಾಲ. ಈ ನ್ಯಾಯಮಂಡಲಕ್ಕೆ ಆಗಾಗ್ಗೆ ದಂಡಿನ ಕಾಯ್ದೆಯ ಬಗ್ಗೆ ಸಲಹೆ ಕೊಡುವುದಕ್ಕಾಗಿ ಕರ್ನಲ್

ಎಫ್. ಸಿ. ಎ. ಕೆರಿನ್ ಅವರನ್ನು ಜಜ್ ಆಡ್ವೋಕೇಟರನ್ನಾಗಿ ನಿಯಮಿಸಲಾಗಿತ್ತು. ಇವರು ಮಧ್ಯಹಿಂದುಸ್ತಾನ ಸೇನಾಧಿಪತ್ಯದ ಡೆಪ್ಯೂಟಿ ಜಜ್ ಅಡ್ವೋಕೇಟ್ ಜನರಲ್ಲರು.

ಆರೋಪಿಗಳ ರಕ್ಷಣೆಯ ಕಾರ್ಯವನ್ನು ರಾಷ್ಟ್ರೀಯ ಮಹಾಸಭೆ ವಹಿಸಿಕೊಂಡಿತ್ತು. ಅದಕ್ಕಾಗಿ ಸುಭಾಸ ಸೇನಾಸಹಾಯ ನಿಧಿಯನ್ನು ಕೂಡಿಸುತ್ತಿದೆ. ಅವರ ಕಟ್ಟಳೆ ನಡೆಯಿಸುವುದಕ್ಕಾಗಿ ಸುರಿತ ಪ್ರಸಿದ್ಧ ಕಾಯದೆಪಂಡಿತರ ಸಮಿತಿಯನ್ನು ನಿಯಮಿಸಲಾಗಿತ್ತು. ಅದರಲ್ಲಿ ಪಂ. ಜವಾಹರಲಾಲ ನೆಹರು, ಸರ್ ತೇಜಬಹಾದ್ದೂರ ಸಪ್ರು, ಭೂಲಾಭಾಯಿ ದೇಸಾಯಿ, ಡಾ. ಕೈಲಾಸನಾಥ ಕಟಜು, ರಾಯ ಬಹಾದ್ದೂರ ಬದ್ರಿದಾಸ, ಅಸಫ ಅಲಿ, ಕನ್ವರ್ ಸರ್ ದಿಲೀಪಸಿಂಹ, ಬಕ್ಷಿ ಸರ್ ತೇಕಚಂದ ಮತ್ತು ಪಿ. ಕೆ. ಸೇನ ಇವರೊಂಬತ್ತು ಜನರಿದ್ದರು. ಕೊನೆಯ ಮೂವರು ನಿವೃತ್ತ ಹೈಕೋರ್ಟ ನ್ಯಾಯಾಧೀಶರು.

## ಆಜಾದ ಹಿಂದ ಧ್ವಜಗೀತೆ

ಕೌಮಿ ತ್ರಿರಂಗೇ ಝುಂಡೇ ಉಂಚೆ ರಹೋ ಜಹಾಮೆ
    ಹೋತೆರೀ ಸರಬಬಂದೀ ಜ್ಯುಂ ಚಾಂದ ಆಂಸಮಾಂ ಮೇ
ತೂ ಮಾನ ಹೈ ಹಮಾರಾ, ತೂ ಸಾನ ಹೈ ಹಮಾರೀ
    ತೂ ಜೀತಕಾ ನಿಶಾ ಹೋ, ತೂ ಜಾನ ಹೈ ಹಮಾರೀ
ಪರ ಏಕ ಬಸರಕೀ ಲತಪರ ಝೂರೀ ಹಯ ಯೇ ದುನಾಯಿ
    ಕೌಮಿ ತ್ರಿರಂಗೀ ಝುಂಡಾ ಹಮ ಶೋಖಸೇ ಉಡಾಯಿ
ಆಕಾಶ ಔರ ಜಮಿ ಪರ ಹೋ ತೇರಾ ಬೋಲಬಾಲಾ
    ಝುಕ ಜಾಯಿ ತೇರೆ ಆಗೆ ಹರ ತಾಜ ತಖ್ತವಾಲಾ,
ಹರ ಕಾಮುಕೀ ನಜರಮೇ ತೂ ಅಮನ ಕಾ ನಿಶಾ ಓ!
    ಹೋ ಐಸೇ ಮುಸ್ಸರ ಸಾಯಾ ತೇರಾ ಜಹಾ ಹೋ
ಮುಸ್ತಾಕ ಬೇ ಸವಾಬೀ ಖುಷ ಹೋಕೇ ಗಾ ರಹಾಹೈ
    ಶಿರ ಪರ ತ್ರಿರಂಗಾ ಝುಂಡಾ ಜಲವಾ ದೀಖಾ ರಹಾಹೈ
ಕೌಮಿ ತ್ರಿರಂಗಾ ಝುಂಡಾ ಉಂಚಾ ರಹೇ ಜಹಾ ಪೇ.



ಆಜಾದ ಹಿಂದ ಸೇನಾಧಿಕಾರಿಗಳ ವಿಚಾರಣೆಯಲ್ಲಿ ಅವರ ರಕ್ಷಣೆಗಾಗಿ ಕಾಂಗ್ರೆಸ್ ನಿಯಮಿಸಿದ ರಕ್ಷಣಾಸಮಿತಿ

# ಬಿಡುಗಡೆ

ಕ್ಯಾ. ಶಹಾನವಾಜ, ಲೆ. ಧಿಲನ್, ಕ್ಯಾ. ಸೈಗಲರ ವಿಚಾರಣೆಯು ಎರಡು ತಿಂಗಳು ಅವ್ಯಾಹತವಾಗಿ ನಡೆದು ತಾ. ೩-೧-೪೬ಕ್ಕೆ ಪೂರ್ಣ ಮುಕ್ತಾಯವಾಯಿತು. ದಂಡಿನ ನ್ಯಾಯಾಲಯದವರು ಈ ಸೇನಾಪತಿ ತ್ರಯರಿಗೆ ಸರಕಾರದ ವಿರುದ್ಧ ಯುದ್ಧ ಹೂಡಿದಬಗ್ಗೆ ವಿಧಿಸಿದ ಕರಿನೀರಿನ ಶಿಕ್ಷೆಯನ್ನು ಹಿಂದುಸ್ತಾನ ಸರಕಾರದ ಮುಖ್ಯ ಸೇನಾಪತಿಗಳು ಕ್ಷಮಿಸಿ ಅವರನ್ನು ಬಿಡುಗಡೆ ಮಾಡಿದರು. ಕೋರ್ಟಿನವರು ಈ ಮೂವರೂ ಅಪರಾಧಿಗಳಿರುವರೆಂದು ನಿರ್ಣಯಮಾಡಿದ್ದರಲ್ಲದೆ ಕ್ಯಾ. ಶಹಾನವಾಜರು ಕೊಲೆಗೆ ಉತ್ತೇಜನಕೊಟ್ಟದ್ದು ಸಿದ್ಧವಾಗಿರುವದೆಂದು ತೀರ್ಮಾನಿಸಿದ್ದರು. ಆದರೆ ದಂಡಿನ ಕೋರ್ಟಿನವರು ಕೊಟ್ಟ ತೀರ್ಮಾನವಾಗಲಿ ಶಿಕ್ಷೆಯಾಗಲಿ ಮುಖ್ಯ ಸೇನಾಪತಿಯಿಂದಲೇ ಸ್ಥಿರಪಡಿಸಲ್ಪಡಬೇಕೆಂದು ನಿಯಮವಿದೆ. ಆ ಮೇರೆಗೆ ಮುಖ್ಯ ಸೇನಾಪತಿಗಳು ಈ ಮೂವರನ್ನೂ ಬಿಡುಗಡೆ ಮಾಡಿದರು. ಕ್ಷಮೆಯ ಕಾರಣವನ್ನು ಸರಕಾರದವರು ಈ ರೀತಿ ಉಲ್ಲೇಖಿಸಿದ್ದಾರೆ.

ಲೆ. ಧಿಲನ ಹಾಗು ಕ್ಯಾ. ಶಹಾನವಾಜರು ಕೊಲೆ ಹಾಗು ಕೊಲೆಗೆ ಉತ್ತೇಜನ ಕೊಟ್ಟ ಆರೋಪದಿಂದ ಮುಕ್ತರಾಗಿರುವರು. ಅವರ ಮೇಲೆ ಉಳಿದ ಪಾಶವೀ ಕೃತ್ಯಗಳ ಆರೋಪವಿರಲಿಲ್ಲ. ಕ್ಯಾ. ಶಹಾನವಾಜರು ಕೊಲೆಗೆ ಉತ್ತೇಜನ ಕೊಟ್ಟದ್ದು ಸಿದ್ಧವಾಗುತ್ತಿದ್ದರೂ ಅವರ ವಿರುದ್ಧ ಸಿದ್ಧವಾದ ಕೃತ್ಯಗಳು ಕಠೋರವಿದ್ದರೂ ಸ್ಥಿರಪಡಿಸುವ ಅಧಿಕಾರಿಯು ಆಗಿನ ಕಾಲದ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತೆಗೆದುಕೊಂಡಿರುವರು. ಆದ್ದರಿಂದ ಮುಖ್ಯ ಸೇನಾಪತಿಗಳು ಶಿಕ್ಷೆಯ ವಿಷಯದಲ್ಲಿ ಮೂರೂ ಆರೋಪಿಗಳನ್ನು ಒಂದೇಸಮನಾಗಿ ನೋಡಿ ಮೂರೂ ಆರೋಪಿಗಳ ಶಿಕ್ಷೆ ಕ್ಷಮಿಸಿ ಬಿಡಲು ನಿರ್ಧರಿಸಿದ್ದಾರೆ. ಆದರೆ ಅಧಿಕಾರಿಯಾಗಲಿ ಸೈನಿಕನಾಗಲಿ ತನ್ನ ರಾಜನಿಷ್ಠೆ ಭಂಗಮಾಡಿ ಸರಕಾರದ ವಿರುದ್ಧ ಯುದ್ಧ ಹೂಡುವದು ಯಾವ ಕಾಲದಲ್ಲೂ ಮಹತ್ವದ ಅಪರಾಧವಾಗಿದ್ದರಿಂದ ಅವರನ್ನು ಸೈನ್ಯದಿಂದ ಹೊರದೂಡುವ ಹಾಗು ಅವರ ಸಂಬಳ ಮತ್ತು ಭತ್ತೆಯ ಬಾಕಿ ಹಣ ಜಪ್ತ ಮಾಡುವ ಶಿಕ್ಷೆ ಸ್ಥಿರಗೊಳಿಸಿರುವರು. ಕಾಯದೆಯಿಂದ ಪ್ರಸ್ಥಾಪಿತವಾದ

ಸದ್ಯದ ಸರಕಾರ ಇಲ್ಲವೆ ಸ್ಥಾಪಿತವಾಗುವ ಭಾವೀ ಸರಕಾರದ ಸ್ಥೈರ್ಯ
ದೃಷ್ಟಿಯಿಂದ ಈ ತತ್ವವನ್ನು ಎತ್ತಿಹಿಡಿಯುವದು ಅವಶ್ಯವಿರುವದು.

ಏನೇ ಇರಲಿ. ಕ್ಯಾ. ಶಹಾನವಾಜ, ಸೈಗಲ, ಲೆ. ಧಿಲಸರನ
ಬಿಡುಗಡೆ ಮಾಡಿದ್ದಕ್ಕಾಗಿ ಹಿಂದುಸ್ತಾನ ಸರಕಾರದ ಸೇನಾಪತಿಗಳನ
ದೇಶದ ಜನರೆಲ್ಲರೂ ಕೊಂಡಾಡದೆ ಇರರು. ಅಖಿಲ ಭಾರತವೇ
ವಿಚಾರಣೆಯ ಕಡೆಗೆ ನಿತ್ಯವೂ ಕುತೂಹಲದಿಂದ ನೋಡುತ್ತಿದ್ದಿತು. ಇ
ರಾಷ್ಟ್ರದ ಪ್ರಶ್ನೆಯೇ ಆಗಿದ್ದಿತು. ಅದಕ್ಕಾಗಿಯೇ ಬಿಡುಗಡೆಯಾದೊಡ
ಒಬ್ಬ ಪತ್ರಿಕಾಪ್ರತಿನಿಧಿಗೆ ಈ ಬೋಸಸೇನಾಧಿಕಾರಿಗಳು ಇಂತು ಹೇಳಿ
ವರು, "ನಮ್ಮನ್ನು ಬಿಡುಗಡೆ ಮಾಡಿದ ಶ್ರೇಯಸ್ಸು ಇಡೀ ರಾಷ್ಟ್ರಕ್ಕೇ ಸ
ತ್ತದೆ. ಇದು ರಾಷ್ಟ್ರದ ವಿಜಯ."

ಇವರನ್ನು ರಕ್ಷಣೆ ಮಾಡುವದರಲ್ಲಿ ತುಂಬಾ ಶ್ರಮವಹಿಸಿದವರೆಂದ
ಶ್ರೀ. ಭೂಲಾಭಾಯಿ ದೇಸಾಯಿಯವರು. ಅವರು ಯಾವ ರೀತಿ ಕೋಟ
ನಲ್ಲಿ ವಾದಿಸಿದರೆಂಬುದನ್ನು ಮಾತ್ರ ಇಲ್ಲಿ ವಿವರಿಸುತ್ತೇವೆ. ಮಿಕ್ಕ
ಸರಕಾರಿ ಸಾಕ್ಷಿಗಳ ಹೇಳಿಕೆ, ಸವಾಲು-ಮರುಸವಾಲುಗಳನ್ನು ಓದುಗ
ಪತ್ರಿಕೆಗಳಲ್ಲಿ ಓದಿರುವದು ಸ್ವಾಭಾವಿಕವಿದೆ.

ಭೂಲಾಭಾಯಿಯವರ ವಾದವು ಮಾತ್ರ ಸ್ವಾರಸ್ಯವೂ ಸಂಗ್ರಾ
ವೂ ಆಗಿರುವದರಿಂದ ಅದನ್ನಿಲ್ಲಿ ಕೊಟ್ಟಿದ್ದೇವೆ.

## ಭೂಲಾಭಾಯಿಯವರ ವಾದ

"ಬ್ರಿಟಿಶ ಚಕ್ರವರ್ತಿಯ ವಿರುದ್ಧ ಯುದ್ಧ ಸಾರಿದ್ದಾರೆ ಮತ್ತು ಕೊ
ಗಳನ್ನು ನಡಿಸಿದ್ದಾರೆ ಎಂಬ ಎರಡು ಆರೋಪಗಳನ್ನು ಈ ಮೂವರು ಆರೋ
ಪಿಗಳ ಮೇಲೆ ಇಡಲಾಗಿದೆ. ಕೆಲವರು ಪಕ್ಷತ್ಯಾಗ ಮಾಡಿದವರ ವಿಚಾರ
ನಡೆಸಿ ಅವರಿಗೆ ಮರಣ ದಂಡನೆಯಿತ್ತು ಗುಂಡಿಕ್ಕಿ ಕೊಲ್ಲಲಾಯಿತು ಎಂದ
ಹೇಳಲಾಗಿದೆ.

ಆರೋಪಿಗಳು ಕೊಲೆ ನಡೆಸಿದ್ದಾರೆಂಬ ಆರೋಪವು ಮೊದಲನೇ
ಆರೋಪದಿಂದಲೇ ಸಂಭವಿಸುವದರಿಂದ ವಿಚಾರಪೂರ್ವಕವಾಗಿ ನೋಡಿ
ನ್ಯಾಯಾಲಯದೆದುರು ಒಂದೇ ಆರೋಪವಿರುತ್ತದೆ. ಚಕ್ರವರ್ತಿಯ ವಿರು
ಯುದ್ಧ ಸಾರಿದಾಗ ಪ್ರತಿಸಲ ಗುಂಡು ಹಾರಿಸಿದ್ದನ್ನೂ ಅಪರಾಧವೆಂದ

ಸಲು ಸಾಧ್ಯವಿರುವಾಗ ಹೀಗೆ ಹೇಳುವದು—ಕೊಲೆಯ ಅಪಾದನೆ ಹೊರಿಸುವದು—ಅಸಂಬದ್ಧವೆಂದು ಹೇಳುತ್ತೇನೆ.

ನಾಲ್ಕು ಜನರನ್ನು ಗುಂಡಿಕ್ಕಿ ಕೊಲ್ಲಲಾಯಿತು ಎಂದು ಕಾಗದ ಪತ್ರಗಳಲ್ಲಿ ದೊರೆಯುವ ವಿನಾ ಎರಡನೆಯ ಆರೋಪಕ್ಕೆ ಬೇರೆ ಯಾವ ಪುರಾವೆ ಇಲ್ಲೆಂಬುದನ್ನು ನಾನು ತೋರಿಸಲಿರುವೆ. ಮಹಮ್ಮದ ಹುಸೇನನಿಗೆ ದಂಡನೆಯಾಯಿತು ಎಂಬ ಬಗ್ಗೆ ಕಾಗದ ಪತ್ರಗಳಲ್ಲಿ ಏನೂ ದೊರಕುವದಿಲ್ಲ. ಒಂದು ವಿಚಾರಣೆಯಲ್ಲಿ ದಂಡನೆಯಾಗಿರಲಿ ಇನ್ನೊಂದರಲ್ಲಿ ಆಗಿರದಿರಲಿ, ಅವನ್ನೆಲ್ಲ ಜಾರಿಯಲ್ಲಿ ತರಲಿಲ್ಲ. ಈ ಎಲ್ಲ ವಿಚಾರಣೆಗಳಲ್ಲಿ ನ್ಯಾಯಾಲಯವು ತನಗೆ ದೊರೆತ ಪುರಾವೆಗಳ ಆಧಾರದ ಮೇಲಿಂದ ತೀರ್ಪನ್ನು ಕೊಡಬೇಕಾಯಿತು ಎಂಬುದನ್ನು ತೋರಿಸುವದೇ ನನ್ನ ಕರ್ತವ್ಯವಾಗಿದೆ.

ದಂಡಿನ ನ್ಯಾಯಾಲಯವು ವಿಚಾರಿಸಲಾಗದಂಥ ಅಸಾಮಾನ್ಯ ಸಂಗತಿಗಳು ಈ ಖಟ್ಲೆಯಿಂದ ಉದ್ಭವಿಸಿವೆ. ದಂಡಿನ ನ್ಯಾಯಾಲಯವು ವೈಯಕ್ತಿಕವಾದ ಅಪರಾಧ ಅಥವಾ ಪಕ್ಷತ್ಯಾಗಗಳ ವಿಚಾರಣೆ ನಡೆಸುತ್ತದೆ. ಈಗ ಈ ಮೂವರು ವೈಯಕ್ತಿಕವಾಗಿ ಬ್ರಿಟಿಶ ಚಕ್ರವರ್ತಿಗಳ ವಿರುದ್ಧ ಯುದ್ಧ ಹೂಡಿಲ್ಲವೆಂಬುವದನ್ನು ನಾನು ಹೇಳುವ ಸಾಹಸ ಮಾಡುತ್ತೇನೆ. ಹಾಗೆ ಪುರಾವೆಗಳೂ ಇವೆ. ಆಪಾದನೆಯಲ್ಲಿ ಹೇಳಿದಂತೆ ಈ ಮೂವರು ಬ್ರಿಟಿಶ ಚಕ್ರವರ್ತಿಗಳ ವಿರುದ್ಧ ಯುದ್ಧ ಹೂಡಿದ ಸಂಘಟಿತ ಸೇನೆಗೆ ಸೇರಿದವರಾಗಿದ್ದಾರೆ.

ಯಾವದೊಂದು ದಾಸ ರಾಷ್ಟ್ರವು ತನ್ನ ವಿಮೋಚನೆಗಾಗಿ ಸ್ವತಂತ್ರವಾಗಿ ಯುದ್ಧಹೂಡಬಲ್ಲದೆ ಎಂಬುದೆ ಈಗ ನ್ಯಾಯಾಲಯದ ಮುಂದೆ ವಿಚಾರಣೆಗಾಗಿ ಇದ್ದ ಪ್ರಶ್ನೆ.

ಯಾವದೊಂದು ರಾಷ್ಟ್ರವಾಗಲಿ, ರಾಷ್ಟ್ರದ ಒಂದು ಅಂಗವಾಗಲಿ ತನ್ನ ವಿಮೋಚನೆಗಾಗಿ ಯುದ್ಧ ಸಾರುವ ಪರಿಸ್ಥಿತಿಗೆ ಬರುತ್ತದೆ ಎಂಬುದನ್ನು ಅಂತರ್‌ರಾಷ್ಟ್ರಿಯ ಕಾಯಿದೆಯಲ್ಲಿ ಮಾನ್ಯ ಅವತರಣಿಕೆಗಳ ಆಧಾರದಿಂದ ನ್ಯಾಯಾಲಯಕ್ಕೆ ಮನದಟ್ಟು ಮಾಡಿಕೊಡುತ್ತೇನೆ.

ಈ ವಿಚಾರಣೆಯು ಸಾರ್ವಜನಿಕರಲ್ಲಿಯೂ ವಿಶೇಷ ಆಸ್ಥೆ ಹುಟ್ಟಿಸಿದೆ ಎಂಬುದನ್ನು ತಮ್ಮ ಗಮನಕ್ಕೆ ಕೊಡಲಿಚ್ಛಿಸುವೆ. ಇದು ಉಚಿತವೊ ಅನುಚಿತವೊ ನಾನು ಹೇಳಲಾರೆ. ಆದರೆ ಇದ್ದದ್ದು ಹೀಗಿದೆ. ಇದರ

ಬಗ್ಗೆ ಸಾರ್ವಜನಿಕರೂ ನ್ಯಾಯಿಸರಾಯನ್ನು ಪ್ರಾರಂಭಿಸಿ ಅನೇಕ ಅಧಿಕಾ
ಗಳೂ ತಮ್ಮ ಮತಗಳನ್ನು ವ್ಯಕ್ತಪಡಿಸಿದ್ದಾರೆ.

## ನಿಷ್ಪಕ್ಷಪಾತದಿಂದ ತೀರ್ಪು ಹೇಳಿರಿ

ನ್ಯಾಯಾಧೀಶರೇ, ನೀವು ಈ ಮೂವರು ಜನರಿಗೆ ನ್ಯಾಯದಾ
ಮಾಡುವ ಪ್ರತಿಜ್ಞೆ ಮಾಡಿರುವಿರಿ. ಆದ್ದರಿಂದ ನೀವು ನಿಮ್ಮ ಸದಸದಿ
ವೇಕದಿಂದ ನಿಮ್ಮೆದುರಿನ ಪುರಾವೆಗಳನ್ನು ಪರಾಮರ್ಶಿಸಿ ನಿಷ್ಪಕ್ಷಪಾತದಿಂದ
ಯಾವ ವರ್ಚಸ್ಸಿಗೂ ಒಳಗಾಗದೆ ತೀರ್ಪನ್ನು ಹೇಳುವಿರೆಂಬಲ್ಲಿ ನನ
ಯಾವ ಸಂದೇಹವೂ ಇಲ್ಲ.

ನಾನು ಕಂಡ ಇಂಥ ವಿಚಾರಣೆಗಳಲ್ಲಿ ನ್ಯಾಯದಾನಕ್ಕೆ ಅವಶ್ಯ
ವಾದ ನಿಷ್ಪಕ್ಷಪಾತದಿಂದಿರುವದು ಮಾನವಮಾತ್ರನಿಗೆ ದುಸ್ಸಾಧ್ಯವೆಂಬ
ದನ್ನು ಕಂಡಿದ್ದೇನೆ.

ಆಝಾದ ಹಿಂದ ಸೇನೆಯ ಕಾಯದೆಯಲ್ಲಿ ಚಮ್ಮಟಿಗೆಯ ಬಡಿತದ
ಶಿಕ್ಷೆ ಹೇಳಿಲ್ಲ ಎಂದಿಷ್ಟೇ ಆಕ್ಷೇಪವೆತ್ತಿದ್ದಾರೆ. ಆದರೆ ೧೯೧೧ ಹಿಂದೀಸೇನೆ
ಯ ಕಾಯದೆಯಲ್ಲಿ ಚಮ್ಮಟಿಗೆಯ ಹೊಡೆತಕ್ಕೆ ಪಾತ್ರವಾಗುವಂಥ ನಾಗ
ರಿಕ ಅಪರಾಧವನ್ನು ಸೈನ್ಯಖಾತೆಯವನು ಮಾಡಿದ್ದರೆ ಅವನಿಗೆ ೩೦ರಷ್ಟು
ಚಮ್ಮಟಿಗೆಯ ಹೊಡೆತ ಕೊಡಬಹುದು ಎಂದಿದ್ದನ್ನು ಮಾನ್ಯ ಅಡ್ವೋಕೇಟ
ಜನರಲರು ಮರೆತಂತೆ ಕಾಣುತ್ತದೆ. ಯುದ್ಧ ಕಾಲದಲ್ಲಿ ಈ ಶಿಕ್ಷೆಯನ್ನು
ರದ್ದುಗೊಳಿಸಿದಾಕ್ಷಣವೆ ಈ ಶಿಕ್ಷೆ ಇದ್ದಿರಲಿಲ್ಲವೆಂದಲ್ಲ.

ವಿಚಾರಣೆಯನ್ನು ಕುರಿತು ಸಾರ್ವಜನಿಕರು ವ್ಯಕ್ತಪಡಿಸಿರುವ ಅಭಿ
ಪ್ರಾಯಗಳಿಂದ ನಿರ್ಣಾಯಕರು ಈ ವಿಚಾರಣೆಯ ಬಗ್ಗೆ ತಮ್ಮ ತೀರ್ಪನ್ನು
ಹೇಳುವಾಗ ಕಂಗೆಡದಿರಲಿ. ನೀವು ಕಾಯದೆ ಮತ್ತು ಸಂಗತಿಗಳು ಇವ
ರಡರ ನಿರ್ಣಾಯಕರಿರುವಿರೆಂದು ನನಗೆ ತಿಳಿದಿದೆ. ನಿಮ್ಮ ಸಲಹೆಗಾರ
ರಾದ ಜಜ್ಜ ಅಡ್ವೋಕೇಟರು ಯೋಗ್ಯ ನ್ಯಾಯದಾನದ ಬಗ್ಗೆ ವಿಶೇಷ
ದಕ್ಷದೆ ವಹಿಸುವರು. ಆದರೂ ಕೊನೆಯ ನಿರ್ಣಯ ಹೇಳುವ ಅಧಿಕಾರ
ಮತ್ತು ಹೊಣೆ ನಿಮ್ಮದೇ ಆಗಿದೆ.

## ವಾದದ ಪ್ರಾರಂಭ

೧೯೪೧ರಲ್ಲಿ ಜಪಾನವು ಆಂಗ್ಲೋ-ಅಮೇರಿಕನರ ವಿರುದ್ಧ ಯುದ್ಧ
ಸಾರಿತು. ಆ ನಂತರ ಈ ನ್ಯಾಯಾಲಯದಲ್ಲಿ ವಾದಗ್ರಸ್ತವಾದ ಕೆಲವು

ಸಂದಿಗ್ಧ ಸಂಗತಿಗಳು ಸಂಭವಿಸಿದವು. ೧೯೪೨ನೇ ಫೆಬ್ರುವರಿ ೧೫ನೇ ತಾರೀಖಿಗೆ ಸಿಂಗಾಪುರದಲ್ಲಿ ಬ್ರಿಟಿಶ ಹಿಂದೀದಳಗಳು ಶರಣು ಹೋದವು ಮತ್ತು ಅದೇ ೧೭ನೇ ತಾರೀಖಿಗೆ ಅಲ್ಲಿಯ ಫರಾರ ತೋಟದಲ್ಲಿ ಅತ್ಯಂತ ಮಹತ್ವದ ಘಟನೆಯು ಸಂಭವಿಸಿತು. ೧೯೪೨ ಸಪ್ಟೆಂಬರದಲ್ಲಿ ರಚಿತವಾದ ಪ್ರಥಮ ಆಝಾದ ಹಿಂದ ಸೇನೆಯು ೧೯೪೩ ಡಿಸೆಂಬರದಲ್ಲಿ ವಿಸರ್ಜಿತ ವಾಯಿತು. ಸುಭಾಸರು ದ್ವಿತೀಯ ಆಝಾದ ಹಿಂದ ಸೇನೆಯ ಆಧಿಪತ್ಯ ವಹಿಸಿಕೊಂಡರು. ವಿಶಾಲವಾದ ಪೂರ್ವ ಏಸಿಯಾದಲ್ಲಿ ಭಾರತ ಸ್ವಾತಂತ್ರ್ಯ ಸಂಘದ ವಿವಿಧ ಶಾಖೆಗಳ ಪ್ರತಿನಿಧಿಗಳ ಪರಿಷತ್ತು ಬಾಂಗಕಾಕದಲ್ಲಿ ಸೇರಿತ್ತು. ಸ್ವತಂತ್ರ ಭಾರತದ ತಾತ್ಪೂರ್ತಿಕ ಸರಕಾರದ ಸ್ಥಾಪನೆಯಾಗ ಬೇಕೆಂದು ಆ ಸಭೆಯ ಒಂದು ಠರಾವಿನಲ್ಲಿ ಹೇಳಲಾಯಿತು. ೧೯೪೩ ಡಿಸೆಂಬರ ೨೧ನೇ ತಾರೀಖಿಗೆ ತಾತ್ಪೂರ್ತಿಕ ಸರಕಾರ ಸ್ಥಾಪಿತವಾಗಿ ಮಂತ್ರಿಗಳು ಪ್ರತಿಜ್ಞಾವಿಧಿ ಜರುಗಿಸಿದರು. ಈ ಸರಕಾರಕ್ಕೆ ನೇತಾಜಿ ಸುಭಾಸರೇ ವರಿಷ್ಠರಾಗಿದ್ದರು.

## ತಾತ್ಪೂರ್ತಿಕ ಸರಕಾರ ಯುದ್ಧ ಸಾರಿತು

ಭಾರತದ ಈ ತಾತ್ಪೂರ್ತಿಕ ಸರಕಾರವು ಬ್ರಿಟನ್-ಅಮೇರಿಕೆಗಳ ವಿರುದ್ಧ ಯುದ್ಧ ಸಾರಿತು. ದ್ವಿತೀಯ ಆಝಾದ ಹಿಂದ ಸೇನೆಯು ಈ ಸರಕಾರದ ಆಜ್ಞಾಪಾಲನೆಯಲ್ಲಿ ತತ್ಪರವಾಯಿತು, ಆಝಾದ ಹಿಂದ ಸೇನೆಯು ಬ್ರಹ್ಮದೇಶದಲ್ಲಿ, ಅದಕ್ಕೂ ಮುಂದೆ ಭಾರತದ ಗಡಿಯಲ್ಲಿ, ಕೋಹಿಮಾದ ವರೆಗೆ ಸಾಗಿಬಂದದ್ದು, ನಂತರ ಹಿನ್ನಡೆದದ್ದು, ಬ್ರಿಟಿಶರು ರಂಗೂನವನ್ನು ಪುನಃ ಆಕ್ರಮಿಸುವದಕ್ಕಿಂತ ಸ್ವಲ್ಪ ಸಮಯ ಮುಂಚೆ, ಆಕ್ರಮಣದ ಕಾಲದಲ್ಲಿ ಮತ್ತು ನಂತರ ಈ ಸೇನೆಯ ಚಟುವಟಿಕೆಗಳು ಇವೇ ಮಹತ್ವದ ಕೆಲವು ಸಂಗತಿಗಳಾಗಿವೆ.

ಸ್ವಂತತ್ರ ಭಾರತದ ತಾತ್ಪೂರ್ತಿಕ ಸರಕಾರವು ಸ್ಥಾಪಿತವಾಯಿತು ಮತ್ತು ಘೋಷಿಸಲಾಯಿತು ಎಂಬುದನ್ನು ನ್ಯಾಯಾಲಯುವು ಒಪ್ಪಿಕೊಳ್ಳ ಬೇಕೆಂದು ಕೇಳಿಕೊಳ್ಳುತ್ತೇನೆ. ಈ ವಿಷಯಧ ಬಗ್ಗೆ ಸಂದೇಹವಿಲ್ಲೆಂದು ನಾನು ಅರಿಕೆಮಾಡಿಕೊಳ್ಳುತ್ತೇನೆ. ಮತ್ತು ಸಾಕ್ಷಿಗಳಾದರೂ ಇದನ್ನು ಕುರಿತು ನಿರ್ದುಷ್ಟವಾಗಿ ಹೇಳಿದ್ದಾರೆ.

ಬ್ರಿಟಿಶರ ನೊಗದಿಂದ ಭಾರತದ ವಿಮೋಚನೆಗಾಗಿ ಮತ್ತು ನಂತರ ಭಾರತೀಯರ ಇಚ್ಛೆಯಂತೆ ತಾತ್ಪೂರ್ತಿಕ ಸರಕಾರದ ರಚನೆಗಾಗಿ ಈ ಸರಕಾರವನ್ನು ಸ್ಥಾಪಿಸಲಾಗಿದೆಂಯೆಬ ತಾತ್ಪೂರ್ತಿಕ ಸರಕಾರದ ಘೋಷಣೆಯನ್ನು ಓದಿತೋರಿಸಿದರು.

ತಾತ್ಪೂರ್ತಿಕ ಸರಕಾರವು ತನ್ನ ಧ್ಯೇಯವನ್ನು ಸಾಧಿಸಲಿಲ್ಲ. ಆದರೆ ನ್ಯಾಯಾಲಯಕ್ಕೆ ಅದು ಮಹತ್ವದ್ದಲ್ಲ. ಎರಡನೆಯದಾಗಿ ತಾತ್ಪೂರ್ತಿಕ ಸರಕಾರವು ಸುಸಂಘಟಿತವಾದದ್ದಿತ್ತು. ಇದನ್ನು ಸಿದ್ಧಮಾಡಿ ತೋರಿಸುವ ಅಗತ್ಯವಿಲ್ಲ. ಈ ಸರಕಾರವು ಮಂತ್ರಿಗಳಿಗೆ ಕೆಲಸ ಹಂಚಿಕೊಟ್ಟದ್ದನ್ನು ಸಾಕ್ಷಿಗಳು ಹೇಳಿದ್ದಾರೆ. ಈ ಸರಕಾರದ ಕಾರ್ಯಕಾರೀ ಮಂಡಳವಾದ ಭಾರತಸ್ವಾತಂತ್ರ್ಯ ಸಂಘವು ಆಗಿನ ಯುದ್ಧ ಕಾಲದಲ್ಲಿ ಸಾಧ್ಯವಿದ್ದಂತೆ ತನ್ನ ಪ್ರಜರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದುದನ್ನು ಸಾಕ್ಷಿಗಳು ಒಪ್ಪಿದ್ದಾರೆ. ೧೯೪೪ ಜೂನದಲ್ಲಿ ೨೩೦೦೦೦ ಜನರು ಈ ಸರಕಾರಕ್ಕೆ ನಿಷ್ಠೆಯಿಂದಿರುವ ಪ್ರತಿಜ್ಞೆ ಮಾಡಿದ್ದರು. ಆನಂತರ ಕೂಡ ಸರಕಾರ ಅಸ್ತಿತ್ವದಲ್ಲಿದ್ದದ್ದೂ ಸಿದ್ಧವಾಗಿದೆ. ಇದು ಸರಕಾರವಾಗಿರಲಿಲ್ಲ ಬಂಡುಗಾರರ ಒಂದು ಗುಂಪಾಗಿತ್ತು ಎಂದು ನೀವಾಗಲಿ, ನನ್ನ ವಿರೋಧಿಯಾಗಲಿ ಹೇಳದಿರಲೆಂದು ಈ ಅಂಕಿಸಂಖ್ಯೆಗಳನ್ನು ಹೇಳುತ್ತಿದ್ದೇನೆ. ಅಂಥ ಆಪಾದನೆ ಸುಳ್ಳೆಂದು ನಾನು ಹೇಳಲಿಚ್ಛಿಸುತ್ತೇನೆ. ಈ ತಾತ್ಪೂರ್ತಿಕ ಸರಕಾರಕ್ಕೆ ೨೦ ಲಕ್ಷಕ್ಕಿಂತ ಹೆಚ್ಚು ಜನರು ನಿಷ್ಠೆಯಿಂದಿದ್ದರು ಮತ್ತು ೨೩೦೦೦೦ ಜನರು ಹಾಗೆ ಪ್ರತಿಜ್ಞೆ ಮಾಡಿದ್ದರು.

### ತಾತ್ಪೂರ್ತಿಕ ಸರಕಾರ ಮನ್ನಿಸಬೇಕು

ಯುದ್ಧ ಸಾಗಿತ್ತೆಂಬುದನ್ನು ಒಪ್ಪುವದಾದರೆ ಕ್ರಾಂತಿಕಾರಿ ಸರಕಾರವನ್ನು ಮನ್ನಿಸುವದೂ ಕ್ರಮಪ್ರಾಪ್ತವಾಗುವದು. ಹೀಗೆ ಮಾನ್ಯತೆ ಕೊಟ್ಟರೆ ಆಝಾದ ಹಿಂದ ಸೇನೆಗೆ ಯುದ್ಧ ಸೌಕರ್ಯಗಳನ್ನು ಕೊಡಬೇಕಾಗುವದು.

ನಿಷ್ಠೆಯ ಪ್ರಶ್ನೆಯು ಅಸಂಬದ್ಧವಾದದ್ದು. ನಿಷ್ಠೆಯೆಂದಿಗೂ ಶಾಶ್ವತ ವಹಿಸಲಾರದು. ಹಾಗಿದ್ದಲ್ಲಿ ದಾಸರಾಷ್ಟ್ರವೆಂದೆಗೂ ಸ್ವತಂತ್ರವಾಗಲಾರದು.

ಇನ್ನೊಂದು ಮಹತ್ವದ ಸಂಗತಿಯೆಂದರೆ ಆಝಾದ ಹಿಂದ ಸರಕಾರಕ್ಕೆ ಅಚ್ಚುರಾಷ್ಟ್ರಗಳು ಮನ್ನಣೆ ಕೊಟ್ಟಿದ್ದವು. ಯಾವುದೊಂದು ರಾಜ್ಯವು ಅಸ್ತಿತ್ವದಲ್ಲಿ ಬರಬೇಕಾದರೆ ಇಂಥ ರಾಷ್ಟ್ರಗಳೇ ಮನ್ನಣೆ ಕೊಡಬೇಕೆಂಬ

ಸಿಯಮವಿಲ್ಲ. ಬೇಕಾದ ರಾಷ್ಟ್ರ ಕೊಟ್ಟರೂ ನಡೆಯುತ್ತದೆ. ಹಾಗೆ ಮನ್ನಣೆ ದೊರೆತ ರಾಷ್ಟ್ರಕ್ಕೆ ಯುದ್ಧಹೂಡುವ ಅಧಿಕಾರವೂ ಪ್ರಾಪ್ತವಾಗುತ್ತದೆ. ಇನ್ನು ಜರ್ಮನಿ ಮತ್ತು ಇಟಲಿಗಳು ಏಕೆ ಮನ್ನಣೆ ಕೊಟ್ಟವೆಂಬದನ್ನು ನೀವು ಕೇಳಬೇಕಾಗಿಲ್ಲ. ಅಂಥ ಸಾಕ್ಷಿಗಳನ್ನು ಹಾಜರು ಮಾಡಲು ಸಹ ಸರಕಾರೀ ವಕೀಲರು ಪ್ರಯತ್ನಿಸಿಲ್ಲ. ಒಟ್ಟಿನಲ್ಲಿ ಆಝಾದ ಹಿಂದ ಸರಕಾರವು ಅಧಿಕೃತ ಸರಕಾರ ಮತ್ತು ಆಝಾದ ಹಿಂದ ಫೌಜ ಅವರ ನೇತೃತ್ವದಲ್ಲಿ ಸುಸಂಘಟಿತವಾದ ಸೈನ್ಯ. ಅದಕ್ಕೆ ಸ್ವತಂತ್ರವಾದ ಕಾಯದೆಯೂ ಇತ್ತು. ಆ ಕಾಯದೆಯನ್ನು ಹೀಗಳೆಯುವದೆಂದರೆ, ಹಿಂದುಸ್ತಾನದ ನಿಮ್ಮ ಕಾಯದೆಯನ್ನೇ ಜರಿದಂತಾಗುವದು.

## ಯುದ್ಧ ಸಾರಿದ್ದರ ಉದ್ದೇಶ

ಇನ್ನೊಂದು ಮುಖ್ಯ ಮಾತೆಂದರೆ, ಅಝಾದ ಹಿಂದ ದಲದ ಯುದ್ಧ ಸಾರಿದ್ದರ ಉದ್ದೇಶವು ಸ್ಪಷ್ಟವಿರುವದು. ಹಿಂದುಸ್ತಾನವನ್ನು ಪರದಾಸ್ಯದಿಂದ ಮುಕ್ತಗೊಳಿಸುವದೇ ಅದು. ಹಿಂದುಸ್ತಾನದ ಬಂಧವಿಮೋಚನೆ ಹಾಗು ಪೂರ್ವ ಏಶಿಯಾದಲ್ಲಿರುವ ಹಿಂದೀಯರ ವಿತ್ತಜೀವಿತಗಳನ್ನು ರಕ್ಷಿಸುವದು. ಇವೆರಡು ಅದರ ಮುಖ್ಯ ಉದ್ದೇಶಗಳು.

## ಸರಕಾರದ ಅಸ್ತಿತ್ವ

ಇನ್ನು ಅಚ್ಚುರಾಷ್ಟ್ರಗಳಿಂದ ಮನ್ನಣೆ ಪಡೆದ ಆಝಾದ ಹಿಂದ ಸರಕಾರಕ್ಕೆ ಅಸ್ತಿತ್ವವಿತ್ತೋ ಇಲ್ಲವೋ ಎಂಬದನ್ನು ನೋಡೋಣ. ಆಝಾದ ಹಿಂದ ಸರಕಾರಕ್ಕೆ ಅಂದಮಾನ ಮತ್ತು ನಿಕೋಬಾರ ನಡುಗಡ್ಡೆಗಳನ್ನು ಕೊಡುವದಾಗಿ ಹಾಗು ಹಿಂದುಸ್ತಾನದ ವಿಮೋಚನೆಗಾಗಿ ಸಹಾಯ ಮಾಡುವದಾಗಿ ಜಪಾನದ ಆಗಿನ ಮುಖ್ಯ ಮಂತ್ರಿಗಳಾಗಿದ್ದ ಜ. ಟೋಜೋ ಇವರು ಆಶ್ವಾಸನ ಕೊಟ್ಟಿದ್ದರೆಂದು ಸರಕಾರದ ಸಾಕ್ಷಿದಾರರಾದ ಲೆ. ನಾಗರೇ ಹೇಳಿದ್ದಾರೆ. ಅದರಂತೆ ಆ ನಡುಗಡ್ಡೆಗಳನ್ನು ಸ್ವಾಧೀನಪಡಿಸಿಕೊಳ್ಳುವ ಸಮಾರಂಭವೂ ನಡೆಯಿತು. ಆಝಾದ ಹಿಂದ ಸರಕಾರದಿಂದ ಈ ನಡುಗಡ್ಡೆಗಳ ಚೀಫ್ ಕಮಿಶನರಾಗಿ ನೇಮಿಸಲ್ಪಟ್ಟ ಕ. ಲೋಕನಾಥನ್ನರಿಗೆ ಜಪಾನಿಗಳು ಅಧಿಕಾರ ಒಪ್ಪಿಸಿಕೊಟ್ಟರು. ಆದರೆ ನಡುಗಡ್ಡೆಗಳ ಪೂರ್ಣ ಆಡಳಿತೆ ಇವರ ಕೈಗೆ ಬಂದಿದ್ದಿಲ್ಲವೆಂದು ಸರಕಾರಿ ವಕೀಲರ ವಾದವಿದ್ದಂತೆ ತೋರುವದು. ಅದು ಇಲ್ಲಿ ಅಸಂಬದ್ಧ. ಒಂದು ಮನೆ ಇನ್ನೊ

ಬ್ಬರ ಹೆಸರಿನಿಂದ ಮಾರಾಟವಾದ ಮೇಲೆಯೂ ಅದನ್ನು ಬಿಟ್ಟುಕೊಡಲಿಕ್ಕೆ ಕೆಲಕಾಲ ಹಿಡಿಯಬಹುದು. ಇಲ್ಲಿ ಸಹ ಪರಿಸ್ಥಿತಿ ಹಾಗೆಯೇ ಇದೆ. ಪೂರ್ಣ ಅಧಿಕಾರ ಇನ್ನೂ ಬಿಟ್ಟುಕೊಟ್ಟಿರಲಿಕ್ಕಿಲ್ಲ. ಆದರೆ ಹಾಗೆ ಜಾಹೀರ ಮಾಡಿದ್ದು ಸುಳ್ಳಲ್ಲ. ಕ. ಲೋಕನಾಥರು ಎರಡು ಖಾತೆಗಳನ್ನು ಸಹ ನಿರ್ವಹಿಸಿಕೊಂಡಿದ್ದರು. ನಡುಗಡ್ಡೆಯ ಪ್ರದೇಶ ಚಿಕ್ಕದು, ಖರ್ಚು ಇದ್ದಿಲ್ಲ, ಶಾಲೆಗಳ ಸಂಖ್ಯೆ ಬಹಳ ಕಡಿಮೆ, ಒಟ್ಟಿನಲ್ಲಿ ಇದು ನಾಮಮಾತ್ರವೆಂದು ಅನ್ನಬಹುದು. ಕೆಲವು ರಾಷ್ಟ್ರಗಳಲ್ಲಿ ನೂರಕ್ಕೆ ೯೫ರಷ್ಟು ಜನರು ಸಾಕ್ಷರರಿದ್ದರೆ. ಹಿಂದುಸ್ತಾನದಂಥ ದೇಶದಲ್ಲಿ ೧೫ರಷ್ಟು ಇರುತ್ತಾರೆ. ಈ ಪ್ರಮಾಣದಿಂದ ಅಂದಮಾನದಲ್ಲಿಯ ಶಾಲೆಗಳ ಸಂಖ್ಯೆ ಬಹಳ ಕಡಿಮೆ, ಆದುದರಿಂದ ಇದು ಸರಕಾರಕ್ಕೆ ಹೇಳಿಕೊಳ್ಳುವಂಥ ವಿಷಯವಲ್ಲ ಎಂದು ವಾದಿಸಲಾಗದು. ಮೇಲಾಗಿ ಈ ನಡುಗಡ್ಡೆಗಳಿಗೆ ಶಾಹೀದ ಮತ್ತು ಸ್ವರಾಜ್ಯ ಎಂದು ಹೊಸ ಹೆಸರು ಇಡಲಾಗಿತ್ತು. ಅದರಂತೆ ಆಝಾದ ಸೈನ್ಯವು ಬರ್ಮಾ ಗಡಿಯನ್ನು ಎರಡು ಸ್ಥಳಗಳಲ್ಲಿ ದಾಟಿ ಹಿಂದುಸ್ತಾನದಲ್ಲಿ ಪ್ರವೇಶಿಸಿದ ಕೂಡಲೆ, ಸುಭಾಸರು ಮತ್ತು ಜಪಾನಿ ಸೇನಾಪತಿ ಜ. ಕ್ವಾಬೆ ಅವರು ಪ್ರಕಟನೆ ಹೊರಡಿಸಿ, ಬಂಧವಿಮೋಚಿತ ಪ್ರದೇಶದ ಮೇಲೆ ಆಝಾದ ಸೈನ್ಯದ ಆಡಳಿತೆಯೇ ನಡೆಯುವದು ಎಂದು ಸಾರಿದ್ದರು. ಮಣಿಪುರ ಮತ್ತು ವಿಷ್ಣುಪುರ ಪ್ರದೇಶಗಳು ಇವರಿಂದಲೇ ಆಳಲ್ಪಡುತ್ತಿದ್ದವೆಂದು ಒಂದಕ್ಕಿಂತ ಹೆಚ್ಚು ಜನ ಸಾಕ್ಷೀದಾರರು ಒಡನುಡಿದಿದ್ದಾರೆ.

## ಸರಕಾರದ ಉತ್ಪನ್ನ

ಆಝಾದ ಸರಕಾರಕ್ಕೆ ಹಣ ಹೇಗೆ ದೊರೆಯುತ್ತಿದ್ದಿದೆಂಬದನ್ನು ನೋಡೋಣ. ಸುಮಾರು ೨೦ ಕೋಟಿ ರೂ. ದೇಣಿಗೆಯಿಂದ ಬಂದಿದ್ದವೆಂಬದನ್ನು ಹಲವಾರು ಸಾಕ್ಷೀದಾರರು ಹೇಳಿರುವರು. ಇದರಿಂದ ಆ ಸರಕಾರದ ಖರ್ಚು ನಡೆಯುತ್ತಿತ್ತು. ಬರ್ಮಾ ಮತ್ತು ಮಲಯಾ ದೇಶಗಳ ಪುನರಾಕ್ರಮಣವಾದ ಮೇಲೆ ಈ ಸರಕಾರದ ಕಾಗದಪತ್ರಗಳೆಲ್ಲ ಹಿಂದುಸ್ತಾನ ಸರಕಾರಕ್ಕೆ ಅಚ್ಚಳಿಯದೇ ಸಿಕ್ಕಿರುತ್ತವೆ. ಅವುಗಳಲ್ಲಿಯ ಒಂದು ಮಾಸಿಕ ವರದಿಯನ್ನು ಸರಕಾರೀ ವಕೀಲರು ಈ ಕೋರ್ಟಿನಲ್ಲಿ ಹಾಜರು ಮಾಡಿದ್ದಾರೆ.

## ಯುದ್ಧದಲ್ಲಿ ಮಾಡಿದ್ದು ಅಪರಾಧವಲ್ಲ

ಎರಡು ರಾಷ್ಟ್ರಗಳು ಒಂದರಮೇಲೊಂದು ಯುದ್ಧ ಹೂಡಿದಾಗ, ಆ ಹೋರಾಟದಲ್ಲಿ ನಡೆದ ಘಟನೆಗಳು ಅಪರಾಧವಲ್ಲ. ಓರ್ವ ಜರ್ಮನನು ಯುದ್ಧದಲ್ಲಿ ೮-೧೦ ಬ್ರಿಟಿಶರನ್ನು ಗುಂಡಿಕ್ಕಿ ಕೊಂದು ಇಂಗ್ಲಂಡದಲ್ಲಿ ಸಿಕ್ಕನೆಂದು ತಿಳಿಯಿರಿ. ಆಗ ಅವನಮೇಲೆ ಕೊಲೆಯ ಆರೋಪವನ್ನು ಹೊರಿಸಲಾಗುವದೇ? ಇಲ್ಲ. ಅದು ಕೊಲೆಯಲ್ಲವೆಂದು ಅಂತರ ರಾಷ್ಟ್ರೀಯ ಕಾಯದೆಯು ಸಹ ಒಪ್ಪಿರುತ್ತದೆ. ಯುದ್ಧವು ನಡೆದಾಗ ಮುನಸಿಪಲ್ ಹಾಗು ಇನ್ನಿತರ ಕಾಯದೆಗಳು ಅಡ್ಡಬರಲಾರವು. ಒಂದು ಪಕ್ಷದ ಸೈನಿಕನು ಇನ್ನೊಂದು ಪಕ್ಷದವನ ಕಿಸೆಯೊಳಗಿನ ಡೈರಿ ಮತ್ತು ಇತರ ಕಾಗದಪತ್ರಗಳನ್ನು ಕಳವು ಮಾಡಿದರೆ ಅದು ಕಳವೆನಿಸಿಕೊಳ್ಳುವದಿಲ್ಲ. ಈ ಮೂವರು ಆರೋಪಿತರಿಂದ ಏನಾದರೂ ಘಟಿಸಿದ್ದರೆ ಅದು ಯುದ್ಧ ನಿರ್ವಾಹಣೆಗಾಗಿ ಇರುವದು.

ನ್ಯಾಯಾಧೀಶರೇ, ಯುದ್ಧದಲ್ಲಿ ನೀವಾದರೂ ಇಂಥ ಕೊಲೆಗಳನ್ನು ಮಾಡಿದಾಗ ನಿಮ್ಮ ಮೇಲೆ ನಾಗರಿಕ ಕಾಯದೆಯಂತೆ ಕೊಲೆಯ ಆರೋಪ ಹೊರಿಸಲು ಬರುವದೇ? ಯುದ್ಧವು ಕ್ರಮಬದ್ಧವೆಂದು ವ್ಹೀಟನ್ನನ 'ಅಂತರರಾಷ್ಟ್ರೀಯ ಕಾಯದೆ' ಪುಸ್ತಕದಲ್ಲಿ ವಿವರಿಸಲಾಗಿದೆ. ಆದ್ದರಿಂದ ಎರಡು ರಾಷ್ಟ್ರಗಳು ಒಂದರಮೇಲೊಂದು ಯುದ್ಧ ಹೂಡಿದಾಗ ಸಂಭವಿಸಿದ ಘಟನೆಗಳಿಗೆ ವ್ಯಕ್ತಿಗಳನ್ನು ಹೊಣೆಯಾಗಿಸುವದಕ್ಕೆ ಬರಲಾರದು. ಯಾಕಂದರೆ ಯುದ್ಧವನ್ನು ವ್ಯಕ್ತಿಯ ಲಾಭಕ್ಕೆ ಮಾಡುವದಿಲ್ಲ, ಅದರಲ್ಲಿ ವ್ಯಕ್ತಿಯ ಸ್ವಾರ್ಥವೂ ಇರುವದಿಲ್ಲ.

## ಸ್ವಾತಂತ್ರ್ಯ ಯುದ್ಧವೂ ನ್ಯಾಯಬದ್ಧವಾದುದು

ಪರದಾಸ್ಯದಿಂದ ಮಾತೃಭೂಮಿಯ ವಿಮೋಚನೆಗಾಗಿ ಯುದ್ಧ ಹೂಡಿದರೆ ಅದು ಸಹ ಕ್ರಮಬದ್ಧವೆಂದು ಅಂತರ ರಾಷ್ಟ್ರೀಯ ಕಾಯದೆಯು ಒಪ್ಪಿರುವದು. ಇಂಗ್ಲಂಡದ ಸ್ವಾತಂತ್ರ್ಯಕ್ಕಾಗಿ ಜರ್ಮನಿ ಇಟಲಿ ಮತ್ತು ಜಪಾನಗಳ ವಿರುದ್ಧ ಹೋರಾಡಲು ಹಿಂದೀಯರಿಗೆ ಅಧಿಕಾರವಿರುತ್ತದೆ. ಆದರೆ ಇಂಗ್ಲಂಡದ ವಿರುದ್ಧ ಹೋರಾಡಿ ಮಾತೃಭೂಮಿಯನ್ನು ವಿಮೋಚನೆಗೊಳಿಸಲು ಅಧಿಕಾರವಿಲ್ಲವೆಂದು ಈ ನ್ಯಾಯಾಲಯದವರು ನಿರ್ಣಯಕೊಟ್ಟಿದ್ದಾ

ದರೆ ಅದರಂಥ ಸತ್ಯದ ಅಪಹಾಸ್ಯ ಇನ್ನೊಂದಿಲ್ಲ. ಆದುದರಿಂದ ಈ
ಯುದ್ಧವು—ಆಝಾದ ಸೇನೆಯು ಹೂಡಿದ ಯುದ್ಧವು ಕ್ರಮಬದ್ಧವೋ
ಎಂದು ಪ್ರಶ್ನಿಸಲಿಕ್ಕೆ ಅವಕಾಶ ಸಹ ಇರುವದಿಲ್ಲ. ಇನ್ನೊಂದು ರಾಷ್ಟ್ರದ
ಮೇಲೆ ಯುದ್ಧ ಹೂಡುವದಾದರೆ ತಮಗೂ ಒಂದು ಸ್ವತಂತ್ರರಾಷ್ಟ್ರವಿರ
ಬೇಕೆಂಬ ಕ್ರಮ ಹಿಂದಿನ ಕಾಲದಲ್ಲಿ ಇತ್ತು. ಈಗ ಇಲ್ಲ. 'ಯುದ್ಧ ರಾಷ್ಟ್ರ
ಗಳಿಗೆ ಸ್ವತಂತ್ರ ರಾಜ್ಯವಿರಬೇಕೆನ್ನುವದು ಈಗ ಅವಶ್ಯವಿರುವದಿಲ್ಲ ಎಂದು
ಅಂತರರಾಷ್ಟ್ರೀಯ ಕಾಯದೆಯಲ್ಲಿಯೇ ಹೇಳಿದೆ. ಒಂದು ರಾಷ್ಟ್ರ ಮತ್ತು
ಅದರ ಪರಕೀಯ ಆಡಳಿತಗಾರರ ನಡುವೆ ನ್ಯಾಯವಾದ ಯುದ್ಧ ನಡೆಯ
ಬಹುದೆಂದು ಮಿ. ವ್ಹೀಟನ್ನನು ತನ್ನ ಪುಸ್ತಕದಲ್ಲಿ ವಿವರಿಸಿ, ಬ್ರಿಟಿಶರು
ಮತ್ತು ದಕ್ಷಿಣ ಆಫ್ರಿಕೆಯ ಯುರೋಪಿಯನ್ನರಲ್ಲಿ ನಡೆದ ೧೯೦೧ ಬೋಅರ
ಯುದ್ಧವನ್ನು ಉದಾಹರಿಸಿದ್ದಾನೆ. ನ್ಯಾಯಾಧೀಶರಾದ ನಿಮಗೆ ಬ್ರಿಟಿಶ್
ಇತಿಹಾಸದ ಜ್ಞಾನ ಸಂಪೂರ್ಣ ಇರುವದು. ಮೊದಲನೇ ಚಾರ್ಲಸ
ರಾಜನ ಕತೆ ನಿಮಗೆ ಗೊತ್ತಿಲ್ಲವೆ? ಅವನನ್ನೇಕೆ ಗಲ್ಲಿಗೇರಿಸಲಾಯಿತು?
ಜಾನ ಅರಸನನ್ನು ಹತ್ತಿಕ್ಕಿ ಮಾಗ್ನಾಕಾರ್ಟಾ ಪಡೆದದ್ದು ಏತಕ್ಕೆ? ಎರಡನೇ
ಜೇಮ್ಸನನ್ನು ಓಡಿಸಿದ್ದು ಏಕೆ?

ನಾನು ನಿಮಗೊಂದು ಸರಳ ಪ್ರಶ್ನೆ ಕೇಳುತ್ತೇನೆ. ಈ ಯುದ್ಧದಲ್ಲಿ
ಬ್ರಿಟಿಶರ ಜೊತೆಯಲ್ಲಿ ನಿಂತು ಹೋರಾಡಿ ಅನೇಕರ ಕೊಲೆಗೆ ಕಾರಣರಾದವ
ರನ್ನು ಈ ಕೋರ್ಟಿನಲ್ಲಿ ವಿಚಾರಣೆಗೆ ನಿಲ್ಲಿಸುವಿರೇನು? ಒಬ್ಬರು ಯುದ್ಧ
ದಲ್ಲಿ ಸೋತ ಮಾತ್ರಕ್ಕೆ ಅವರು ಅಪರಾಧಿಗಳೆಂದು ಕೊಲೆಗಡಕರೆಂದು
ಆರೋಪಿಸಲು ಬರುವದೇ? ಆಝಾದ ಸೈನ್ಯ ಸಂಘಟಿಸಿದವರು ಕ್ರಾಂತಿ
ಕಾರಕರಲ್ಲವೆಂದು ನಾನೇನೂ ಹೇಳುವದಿಲ್ಲ. ಈ ಸೈನ್ಯ ಸಂಘಟಿಸಿದವರು,
ಆಝಾದ ಹಿಂದ ಸರಕಾರ ಸ್ಥಾಪಿಸಿದವರು, ಕ್ರಾಂತಿಕಾರಕರು, ಬಂಡುಗಾರ
ರು ಎಂದು ಸದ್ಯಕ್ಕೆ ತಿಳಿಯುತ್ತೇನೆ.' ಆದರೆ ಅಮೇರಿಕೆಯ ಅಧ್ಯಕ್ಷ
ಗ್ರಾಂಟನು ೧೮೭೦ ಜುಲೈ ೧೩ಕ್ಕೆ ಕೊಟ್ಟ ಸಂದೇಶದಲ್ಲಿ ಏನು ಹೇಳಿರುವ
ನೆಂಬದನ್ನು ನೋಡಿರಿ:—" ಯುದ್ಧ ಹೂಡಿರುವರೋ ಅಥವಾ ಇಲ್ಲವೋ
ಎಂಬದನ್ನು ಯಾರೂ ನಿರ್ಣಯಿಸಲಾರರು. ಆದರೆ ಸರಕಾರ ಮತ್ತು
ಸಾರ್ವಜನಿಕರಲ್ಲಿ ಯುದ್ಧ ಹೂಡುವಷ್ಟು ದ್ವೇಷವುಂಟಾದರೆ ಸಾಕು ಅದಕ್ಕೆ
ಯುದ್ಧವೆನ್ನಬಹುದು."

## ಯುದ್ಧ ಒಪ್ಪಿದ ಮೇಲೆ ಸರ್ಕಾರವಿದ್ದಂತಾಯಿತು

ಬ್ರಿಟಿಶ್ ಇಯರ ಬುಕ್‌ದಲ್ಲಿ ಈ ರೀತಿ ಹೇಳಿದೆ:—"ಯುದ್ಧವು ಪ್ರಾರಂಭವಾದುದು ಮಹತ್ವದ್ದಲ್ಲ. ಆದರೆ ಎದುರಾಳಿಗಳು ಯುದ್ಧ ಹೂಡಿರುವರೆಂದು ಒಪ್ಪಿ ನಾವು ಹೋರಾಟ ಪ್ರಾರಂಭಿಸಿದರೆ ಎದುರಾಳಿಗಳ ಸರಕಾರವನ್ನೂ ಒಪ್ಪಿದಂತಾಗುವದು." ಒಂದು ಯುದ್ಧ ನಡೆಯಬೇಕಾದರೆ ಎರಡು ರಾಷ್ಟ್ರಗಳಾದರೂ ಬೇಕು. ಯುದ್ಧವನ್ನು ಒಪ್ಪಿಕೊಂಡ ನಂತರ, ಅದನ್ನು ಹೂಡಿದ ರಾಷ್ಟ್ರದ ಅಸ್ತಿತ್ವವನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಯಾಕಂದರೆ ಒಂದು ಕೈಯಿಂದ ಚಪ್ಪಾಳೆಯಾಗುವದಿಲ್ಲ; ಒಂದೇ ರಾಷ್ಟ್ರದಿಂದ ಯುದ್ಧವಾಗುವದಿಲ್ಲ. ಆದುದರಿಂದ ಅಂಥ ಯುದ್ಧದಲ್ಲಿ ತೊಡಗಿದವರಿಗೆ ಯುದ್ಧ ನೀತಿಯು ಸವಲತ್ತುಗಳನ್ನೆಲ್ಲ ಕೊಡಬೇಕು.

ನನ್ನ ಹೇಳಿಕೆಯ ಸಮರ್ಥನೆಗಾಗಿ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ.

ಸ್ಪೇನದ ಅಮೇರಿಕನ್ ವಸಾಹತುಗಳು ತಮ್ಮ ಅರಸರ ವಿರುದ್ಧ ಬಂಡು ಹೂಡಿದಾಗ, ಬ್ರಿಟನು ಅವರ ಸ್ವಾತಂತ್ರ್ಯ ಹೋರಾಟವನ್ನು ಮನ್ನಿಸಿತ್ತು.

## ಪ್ರತಿಜ್ಞೆ ಶಾಶ್ವತವಲ್ಲ

ಈ ಯುಗದಲ್ಲಿ ದಾಸ್ಯ ರಾಷ್ಟ್ರಗಳು ಸ್ವತಂತ್ರವಾಗುವದಕ್ಕೆ ಯಾರ ಅಪ್ಪಣೆಯನ್ನೂ ಕೇಳಬೇಕಾಗಿಲ್ಲ. ರಾಜನಿಷ್ಠೆಯ ಪ್ರತಿಜ್ಞೆ ಅಸಂಬದ್ಧವಿರುವದು. ಅದು ಕಾಯಿದೆಯ ದೃಷ್ಟಿಯಿಂದ ಶಾಶ್ವತವಿರುವದಿಲ್ಲ. ಹಾಗಿದ್ದಲ್ಲಿ ಗುಲಾಮರಿಗೆ ಎಂದಿಗೂ ಸ್ವಾತಂತ್ರ್ಯ ಸಿಗುವದಿಲ್ಲ. ಆದುದರಿಂದ ಈ ನ್ಯಾಯಾಲಯದಲ್ಲಿ ರಾಜನಿಷ್ಠೆಯ ಪ್ರಶ್ನೆಯನ್ನೆತ್ತುವದಿಲ್ಲೆಂದು ನಾನು ಆಶಿಸುತ್ತೇನೆ.

## ಮೊದಲೇ ರಾಜ್ಯವಿರುವ ಅವಶ್ಯಕತೆ ಇಲ್ಲ

ಯುದ್ಧ ಹೂಡಬೇಕಾದರೆ ಮೊದಲೇ ರಾಜ್ಯವಿರಬೇಕೆಂಬ ತತ್ವವು ಈಗ ಮಾನ್ಯವಿರುವದಿಲ್ಲ. ಮೊನ್ನಿನ ಯುದ್ಧದಲ್ಲಿ ಯುರೋಪದ ಅನೇಕ ಸರಕಾರಗಳು ಲಂಡನದ ಖಾನಾವಳಿಗಳಲ್ಲಿದ್ದವು. ಅವುಗಳಿಗೆ ಒಂದು ಇಂಚಿನಷ್ಟು ಸಹ ಭೂಮಿ ಇದ್ದಿಲ್ಲ. ಈ ರಾಷ್ಟ್ರಗಳ ಭೂಮಿಯನ್ನು ಕಸಿದುಕೊಳ್ಳಲಾಗಿತ್ತೆಂದು ಹೇಳಬಹುದು. ಆದರೆ ಹಿಂದೀಯರ ದೇಶವನ್ನು

೧೫೦ ವರ್ಷಗಳಿಂದ ಕಸಿದುಕೊಳ್ಳಲಾಗಿದೆ. ಕೆಲಕಾಲ ಅಥವಾ ೧೫೦ ವರ್ಷ ಕಸಿದುಕೊಳ್ಳುವದರಲ್ಲಿ ಯಾವ ಭೇಧವೂ ಇಲ್ಲ.

ಕಳೆದುಕೊಂಡ ದೇಶಗಳನ್ನು ಮರಳಿ ಸಂಪಾದಿಸುವದಕ್ಕೆ ಅವಧಿ ಮಿತಿಯ ಕಾಯದೆಯಿದೆಯೆಂದು ನನಗನಿಸುವದಿಲ್ಲ. ಮೇಲೆ ಉದಾಹರಿಸಿದ ದೇಶಾಂತರ ಹೋದ ಸರಕಾರಗಳಿಗೆ ಕೆಲ ಕಾರಣಗಳ ಮೂಲಕ ತಮ್ಮ ದೇಶಗಳನ್ನು ಮರಳಿ ಪಡೆಯುವದಾಗದಿದ್ದರೆ ಮೊದಲು ಕೊಟ್ಟಿದ್ದ ಯುದ್ಧ ಸವಲತ್ತುಗಳನ್ನು ಹಿಂದಿನಿಂದ ಕಸಿದುಕೊಳ್ಳಲಾಗುವದೇ? ಮಾನ್ಯ ನ್ಯಾಯಾಧೀಶರೇ, ನಾವು ಹಿಂದೀಯರೆಂದು ಈ ಪ್ರಶ್ನೆಯನ್ನು ಬೇರೆ ದೃಷ್ಟಿಯಿಂದ ವಿಚಾರಿಸಬೇಡಿರಿ.

## ಐಸೆನಹಾವರವರ ಪ್ರಕಟನೆ

ಫ್ರಾನ್ಸದ ಮಾಕ್ವಿಸ್ ದಲವು ಫ್ರೆಂಚ ಸೈನ್ಯದ ಒಂದು ಅಂಗವೆಂದು ಭಾವಿಸಬೇಕೆಂದು ಜನರಲ್ ಐಸೆನಹಾವರವರು ಒಂದು ಪ್ರಕಟನೆ ಹೊರಡಿಸಿದ್ದರು. ಜರ್ಮನರು ಅದಕ್ಕೆ ಉತ್ತರರೂಪವಾಗಿ ಅವರು [ ಮಾಕ್ವಿಸ್ ದಲವು ] ಸ್ಥಾಪಿತವಾದ ಫ್ರೆಂಚ ಸರಕಾದ ವಿರುದ್ಧ ಬಂಡು ಹೂಡಿದುದರಿಂದ ಸೈನ್ಯದ ಅಂಗವಿಲ್ಲವೆಂದರು. ಜರ್ಮನರ ಈ ಹೇಳಿಕೆಯನ್ನು ಒಪ್ಪಿಕೊಳ್ಳಬೇಕೆಂದು ಅಡ್ವೋಕೇಟ ಜನರಲ್ಲರು ಹೇಳಿದ್ದಾರೆ. ಐಸೆನಹಾವರವರ ಹೇಳಿಕೆ ಸರಿಯಾದುದು. ಆದರೆ ಬ್ರಿಟಿಶ ಕೋರ್ಟಿನಲ್ಲಿ ಅಂಥ ಪ್ರಸಂಗ ಬಂದರೆ ಅದನ್ನು ಯಾವ ದೃಷ್ಟಿಯಿಂದ ನೋಡುವಿರೋ ತಿಳಿಯದು. ಮಾಕ್ವಿಸ ದಲಗಳು ಮಾತೃಭೂಮಿಯ ವಿಮೋಚನೆಗಾಗಿ ಸರಕಾರದ ವಿರುದ್ಧ ಬಂಡು ಹೂಡಿದರೂ ಅವರಿಗೆ ಯುದ್ಧನೀತಿಯ ಸವಲತ್ತುಗಳನ್ನು ಕೊಡಲಾಯಿತು. ಹಿಂದೀಯರಿಗೂ ಹಾಗೆ ಕೊಡಬೇಕಲ್ಲವೇ?

## ಅರಸರ ವಿರುದ್ಧ ಯುದ್ಧ ಸಾರುವದು ಗುರುತರ ಆರೋಪವಲ್ಲ.

ಅರಸರ ವಿರುದ್ಧ ಯುದ್ಧ ಹೂಡಿದುದಲ್ಲದೆ ಕೊಲೆ ಮೊದಲಾದ ಗಂಭೀರ ಆರೋಪಗಳಿದ್ದವರ ಮೇಲೆ ಮಾತ್ರ ಖಟ್ಲೆ ಹಾಕಲಾಗುವದೆಂದು ಉಪಭಾರತ ಮಂತ್ರಿಗಳಾದ ಹೆಂಡರಸನ್ನರು ಮೊನ್ನೆ ಮೊನ್ನೆ ಬ್ರಿಟಿಶ ಸರಕಾರದ ಧೋರಣ ಸ್ಪಷ್ಟೀಕರಿಸಿದ್ದಾರೆ. ಅಂದರೆ ಅರಸರ ವಿರುದ್ಧ ಯುದ್ಧ ಹೂಡಿದುದು ಅಷ್ಟೇನೂ ದೊಡ್ಡ ಅಪರಾಧವಲ್ಲವೆಂದು ಅವರು ಒಪ್ಪಿಕೊಂಡಂತಾಯಿತು.

## ರಾಜನಿಷ್ಠೆಯ ಪ್ರಶ್ನೆಯನ್ನೆತ್ತಿದರೆ

ಒಂದು ವೇಳೆ ಸರಕಾರೀ ವಕೀಲರು ರಾಜನಿಷ್ಠೆಯ ಪ್ರಶ್ನೆಯನ್ನೆತ್ತಿದರೆ, ನನ್ನ ವಾದವು ಹೀಗಿರುವದು. ಸಿಂಗಾಪುರ ಪತನವಾದನಂತರ ಬ್ರಿಟಿಶ್ ಮತ್ತು ಹಿಂದೀ ಸೈನಿಕರನ್ನು ಪ್ರತ್ಯೇಕಿಸಿ ಲೆ. ಕ. ಹಂಟರರು ಹಿಂದೀಯರನ್ನು ಜಪಾನರಿಗೆ ಒಪ್ಪಿಸಿ ಮಾತೃಭೂಮಿಯ ವಿಮೋಚನೆಗೆ ನೀವು ಹೋರಾಡ ಬಯಸಿದರೆ ಹಾಗೆ ಮಾಡಬಹುದೆಂದು ಹೇಳಿದರು. ರಾಷ್ಟ್ರನಿಷ್ಠೆಯ ಹೊರತು ಅನ್ಯಮಾರ್ಗ ಉಳಿಯಲಿಲ್ಲವೆಂದು ಕ್ಯಾ. ಅರಶದರು ನುಡಿದಿದ್ದಾರೆ. ಅರಸ ಮತ್ತು ರಾಷ್ಟ್ರ ಹೀಗೆ ಇವೆರಡರ ವಿರುದ್ಧ ಹೋರಾಡಿ ಮಹಾಪರಾಧ ಮಾಡಿದನೆಂದು ಜಾನ್ ಅಮೆರಿಯ ಖಟ್ಲೆಯಲ್ಲಿ ಹೇಳಲಾಯಿತು. ಹಿಂದುಸ್ತಾನದ ವಿಷಯದಲ್ಲಿ ಅರಸ ಮತ್ತು ರಾಷ್ಟ್ರವನ್ನು ಪ್ರತ್ಯೇಕಿಸಿದ ನಂತರ ರಾಜನಿಗೇ ನಿಷ್ಠೆಯಾಗಿ ಉಳಿಯಿರೆಂದು ಹೇಳುವದು ಹೇಗೆ? ಅರಸ ಮತ್ತು ರಾಷ್ಟ್ರ ಒಂದೇ ಆಗಿದ್ದರೆ ಆ ಮಾತು ಬೇರೆ. ಎರಡೂ ಭಿನ್ನವಾಗಿದ್ದರೆ ರಾಜನಿಗಿಂತ ರಾಷ್ಟ್ರಕ್ಕೇ ನಿಷ್ಠನಾಗಿರುವದು ಶ್ರೇಯಸ್ಕರ. ಮಾತೃಭೂಮಿಯ ವಿಮೋಚನೆಗಾಗಿ ಹೋರಾಡುವಾಗ, ಅದನ್ನು ತಡೆಯುವಂಥ ಇನ್ನೊಂದು ನಿಷ್ಠೆ ಅಡ್ಡಬರಬಹುದೇ? ಬ್ರಿಟಿಶರು ಹಿಂದೀಯರನ್ನು ಜಪಾನಿಗಳಿಗೆ ಒಪ್ಪಿಸಿ ಅವರು ಒತ್ತಾಯದಿಂದ ನಿಷ್ಠೆ ಬದಲಿಸಿಕೊಳ್ಳುವಕ್ಕೆ ಆಸ್ಪದ ಮಾಡಿಕೊಟ್ಟರು.

## ಆಝಾದ ಸೈನ್ಯವು ಜಪಾನರ ಹಸ್ತಕವಲ್ಲ

ಇನ್ನು ಆಝಾದ ಸೈನ್ಯವು ಜಪಾನದ ಹಸ್ತಕವೆಂದು ಆರೋಪಿಸಬಹುದು. ಇದನ್ನು ನಾನು ಒಪ್ಪಲಾರೆ. ಆಝಾದ ಸೈನ್ಯವು ಚಿಕ್ಕದಾಗಿದ್ದರೂ ಸ್ವತಂತ್ರ ಮಿತ್ರನಂತೆ ವರ್ತಿಸುತ್ತಿತ್ತು. ಹಿಂದುಸ್ತಾನವನ್ನು ಬ್ರಿಟಿಶರ ಆಡಳಿತೆಯಿಂದ ಮುಕ್ತಗೊಳಿಸುವದೇ ಆಝಾದ ಹಿಂದ ಮತ್ತು ಜಪಾನಿ ಸೈನ್ಯಗಳ ಉದ್ದೇಶವಿತ್ತು. ಇವೆರಡೂ ಸೈನ್ಯಗಳು ಭುಜಕ್ಕೆ ಭುಜ ಹಚ್ಚಿ ಮಿತ್ರನಂತೆ ಹೋರಾಡಿವೆ. ಫ್ರಾನ್ಸ ಬೆಲ್ಜಿಯಂ ಸೈನ್ಯಗಳು ಬ್ರಿಟಿಶರೊಡನೆ ಸಹಕರಿಸಿ ಕೆಲಸ ಮಾಡಿದ್ದರಿಂದ ಅವರು ಇವರ ಹಸ್ತಕರೆನ್ನಬೇಕೇನು? ಬ್ರಿಟಿಶರು ಮತ್ತು ಅಮೇರಿಕನ್ನರು ಕೂಡಿ ಅಮೇರಿಕನರಾದ ಜ. ಐಸೆನಹಾವರವರ ನೇತೃತ್ವದಲ್ಲಿ ಯುದ್ಧ ಮಾಡಿದರು. ಆದರೆ ಬ್ರಿಟಿಶರು ಅಮೇರಿಕನರ ಹಸ್ತಕರೆಂದು ನಾವು ಹೇಳಲಾರೆವು. ಆಝಾದ ಸೈನ್ಯವು ಸ್ವತಂತ್ರ

ವೃತ್ತಿಯಿದಿತ್ತೆಂದು ಮತ್ತು ಜಪಾನರು ಹಾಗು ಆಝಾದರು ಮಿತ್ರರಂತೆ ಹೋರಾಡಿದರೆಂದು ಲೆ. ನಾಗರು ಹೇಳಿದ್ದಾರೆ. ಹೀಗಿರುವಾಗ ಆಝಾದ ಸೈನ್ಯವು ಬೇರೊಂದು ಉದ್ದೇಶಕ್ಕಾಗಿ ಹೋರಾಡಿತೆಂದು ಹೇಳುವದೇ? ಇಲ್ಲ. ಭಾರತಮಾತೆಯ ಬಂಧವಿಮೋಚನೆಗಾಗಿ ಹೋರಾಡಿತೆಂದು ಒಂದಲ್ಲದಂತೆ ಹಲವು ಸಾಕ್ಷೀದಾರರು ಹೇಳಿರುವರು. ಅವರು ಎಂದೂ ಜಪಾನರ ಹಸ್ತಕರಾಗಿದ್ದಿಲ್ಲ.

ಸಿಂಗಾಪುರದ ಫರಾರ ತೋಟದಲ್ಲಿ ಸಂಭವಿಸಿದ ಘಟನೆಯನ್ನೂ ಭಾರತದಲ್ಲಿಯ ಅಗಿನ ಪ್ರತ್ಯಕ್ಷ ಸ್ಥಿತಿಯನ್ನೂ ಗಮನಿಸಿದರೆ ಅಮೇರಿಕೆಯ ವಸಾಹತುಗಾರರು ೧೭೭೬ರಲ್ಲಿ ನಡೆದುಕೊಂಡಂತೆ ಈಗ ಆಝಾದ ಹಿಂದ ಫೌಜದವರು ನಡೆದುಕೊಂಡದ್ದು ಸಂಪೂರ್ಣ ಕ್ರಮಬದ್ಧವಾಗಿದೆ. ಇತಿಹಾಸವು ಈ ಘಟನೆಯನ್ನು ಕ್ರಮಬದ್ಧವಾಗಿಸಿದೆ. ನಾನು ಅಮೇರಿಕೆಯ ಸ್ವಾತಂತ್ರ್ಯಘೋಷಣೆಯನ್ನು ಈ ನ್ಯಾಯಾಲಯಕ್ಕೆ ಸಾದರಪಡಿಸುತ್ತೇನೆ. ಮುಂದೆ ಯಾವ ಪ್ರಶ್ನೆ ಉದ್ಭವಿಸಿದರೂ ನೀವಿದನ್ನು ನಿಮ್ಮ ಬುದ್ಧಿಯಿಂದ ನ್ಯಾಯವಾದುದೆಂದು ಗೌರವಿಸುತ್ತೀರೆಂದು ನಂಬಿದ್ದೇನೆ. ಅಮೇರಿಕೆಯ ಸ್ವಾತಂತ್ರ್ಯಘೋಷಣೆಯಲ್ಲಿಯ ಶಬ್ದಗಳು ಇಂದು ಎಷ್ಟೊಂದು ನಿಜವಾಗಿ ಪರಿಣಮಿಸಿವೆ!

ಅಮೇರಿಕಾ ಬ್ರಿಟನಗಳ ವರಿಷ್ಠರು ಇತ್ತೀಚೆಗೆ ಹೊರಡಿಸಿದ ಪ್ರಕಟನೆಗಳೂ ಅಮೇರಿಕೆಯ ಸ್ವಾತಂತ್ರ್ಯ ಘೋಷಣೆಯನ್ನೇ ಹೆಚ್ಚಾಗಿ ಹೋಲುತ್ತವೆ. " ಜನರೆಲ್ಲ ಹುಟ್ಟಿನಿಂದ ಸರಿಸಮಾನಿಗರಾಗಿದ್ದಾರೆ. ಮತ, ಜೀವ, ಸ್ವಾತಂತ್ರ್ಯ ಮತ್ತು ಸುಖಾಪೇಕ್ಷೆ ಮೊದಲಾದವು ದೇವರಿಂದ ಅವರಿಗೆ ಕೊಟ್ಟ ಹಕ್ಕುಬಾಧ್ಯತೆಗಳಾಗಿವೆ" ಎಂದು ಈ ಪ್ರಕಟನೆಯಲ್ಲಿ ಹೇಳಲಾಗಿದೆ.

ಸ್ವತಂತ್ರ ಭಾರತದ ತಾತ್ಪೂರ್ತಿಕ ಸರಕಾರಕ್ಕೆ ನಿಷ್ಠೆವಹಿಸುವ ಪ್ರತಿಜ್ಞೆಯನ್ನು ಶ್ರೀ. ಭೂಲಾಭಾಯಿಯವರು ಅಮೇರಿಕೆಯ ಸ್ವಾತಂತ್ರ್ಯಘೋಷಣೆಯೊಂದಿಗೆ ಹೋಲಿಸಿ ಅವೆರಡೂ ಒಂದೇ ಅಗಿರುವವೆಂದು ಹೇಳಿದರು.

ಇತರ ದೇಶಗಳಲ್ಲಿಯ ಕಟ್ಟಳೆಗಳಲ್ಲಿರುವಂತೆ ಇಂಡಿಯನ್ ಪಿನಲ ಕೋಡಿನಲ್ಲಿ 'ರಾಜದ್ರೋಹ'ವೆಂಬ ಸಂದಿಗ್ಧ ಶಬ್ದವಿಲ್ಲದಿರುವದರಿಂದ ಸರಕಾರೀಪರ ವಕೀಲರು ರಾಜದ್ರೋಹದ ತತ್ವವನ್ನು ಮುಂದೆ ಮಾಡಲಿಕ್ಕಿಲ್ಲವೆಂದು ನಾನು ಆಶಿಸುತ್ತೇನೆ.

## ದಾಸರಾಷ್ಟ್ರದ ಸ್ವಾತಂತ್ರ್ಯ

ಯಾವದೊಂದು ಪ್ರಬಲ ರಾಷ್ಟ್ರವು ತನ್ನ ಆಧೀನದಲ್ಲಿದ್ದ ದುರ್ಬಲ ರಾಷ್ಟ್ರವನ್ನು ಎದುರಿಸಲಾರದೇ ಹೋದಲ್ಲಿ ಆ ದುರ್ಬಲ ರಾಷ್ಟ್ರವು ತಂ-ತಾನೇ ಸ್ವಾತಂತ್ರ್ಯ ಪಡೆಯುವದು ಎಂಬುದಕ್ಕೆ ಶ್ರೀ. ಭೂಲಾಭಾಯಿಯವರು ೧೮೪೭ರಲ್ಲಿಯ ಒಂದು ಆಧಾರವನ್ನು ತೋರಿಸಿ ಆಝಾದ ಹಿಂದ ಸೇನೆಯ ಬಗ್ಗೆ ಇದೇ ಅನ್ವಯಿಸುತ್ತದೆ ಎಂದರು. ವೆಟಲ ಎಂಬವರ 'ರಾಷ್ಟ್ರಗಳ ಕಾಯಿದೆಗಳು' ಎಂಬ ಪುಸ್ತಕವೇ ಈ ಮೇಲೆ ಹೇಳಿದ ಆಧಾರ ಗ್ರಂಥವಾಗಿತ್ತು. ಅದರಲ್ಲಿ ಹೀಗೆ ಹೇಳಿದೆ:—

"ಯಾವದೊಂದು ರಾಷ್ಟ್ರವು ತನ್ನ ಸಂರಕ್ಷಣೆಗಾಗಿ ಇನ್ನೊಂದು ಪ್ರಬಲ ರಾಷ್ಟ್ರದಲ್ಲಿ ಸೇರಿಹೋಗಿರಲಿ ಅಥವಾ ಅದರ ದಾಸ್ಯವನ್ನೇ ಸ್ವೀಕರಿಸಿರಲಿ ಆ ಪ್ರಬಲ ರಾಷ್ಟ್ರವು ಇದರ ಯೋಗ್ಯ ಸಂರಕ್ಷಣೆಯನ್ನು ಮಾಡದೆ ಹೋದರೆ ಪರಸ್ಪರರಲ್ಲಿಯ ಒಡಂಬಡಿಕೆ ಮುರಿದಂತಾಗಿ ಆ ದುರ್ಬಲ ರಾಷ್ಟ್ರವು ತನ್ನ ಎಲ್ಲ ಹಕ್ಕುಬಾಧ್ಯತೆಗಳನ್ನೂ ಸ್ವಾತಂತ್ರ್ಯವನ್ನೂ ಸಂಪೂರ್ಣವಾಗಿ ಪಡೆದುಕೊಳ್ಳುತ್ತದೆ. ಪ್ರಬಲರಾಷ್ಟ್ರದ ಸದ್ಧುದ್ದೇಶವಿದ್ದರೂ ಕೈಲಾಗದೆ ತನ್ನ ಅಧೀನ ರಾಷ್ಟ್ರವನ್ನು ಅದು ಸಂರಕ್ಷಿಸಲಾರದೆ ಹೋದರೂ ಆ ರಕ್ಷಿತ ರಾಷ್ಟ್ರವು ಸ್ವತಂತ್ರವಾಗಬಲ್ಲದು. ಆಸ್ಟ್ರಿಯಾದ ಡ್ಯೂಕನು ಲ್ಯೂಸರ್ನ ನಗರವನ್ನು ಸಂರಕ್ಷಿಸಲಿಕ್ಕೆ ಅಸಮರ್ಥನಾಗಲು ಆ ನಗರದವರು ಸ್ವತಂತ್ರರಾದರು. ಆ ಬಗ್ಗೆ ಡ್ಯೂಕನು ಸಾಮ್ರಾಟರಲ್ಲಿಗೆ ತಕರಾರು ಒಯ್ಯಲು ಲ್ಯೂಸರ್ನದ ನಾಗರಿಕರು ತಮಗೆ ಯೋಗ್ಯ ರಕ್ಷಣೆ ದೊರೆಯದ್ದರಿಂದ ತಾವು ತಮ್ಮ ನ್ಯಾಯಬದ್ಧವಾದ ಹಕ್ಕುಗಳನ್ನು ಪಡೆದು ಸ್ವತಂತ್ರರಾಗಿರುವುದಾಗಿ ಉತ್ತರಿಸಿದರು."

## ಸ್ವಾತಂತ್ರ್ಯ ಸಮರ

ಈಗ ಕೇವಲ ವಾದಕ್ಕೆಂದರೂ ಈ ಮೂವರು ಆರೋಪಿಗಳು ಜಪಾನಿಗಳ ಕೈಯಲ್ಲಿ ಕೇವಲ ಯುದ್ಧಾಪರಾಧಿಗಳಾಗಿದ್ದರು. ಈಗ ಸಂಭವಿಸಿರುವ ಸಂಗತಿಗಳಾವವೂ ಸಂಭವಿಸಿರಲಿಲ್ಲವೆಂದು ಗ್ರಹಿಸಿದರೂ ಇವರು ಯುದ್ಧಬಂದಿಗಳ ನಿಯಮವನ್ನು ಮುರಿದಿಲ್ಲ, ಅವರು ಶತ್ರುಗಳ ಹಸ್ತಕರಾಗಿದ್ದಿಲ್ಲ. ಯುದ್ಧಬಂದಿಯಾದವನು ತನ್ನ ರಾಷ್ಟ್ರದ ವಿಮೋಚನೆಗಾಗಿ ತಾನಾಗಿಯೇ ಹೋರಾಡಬಾರದೆಂಬ ನಿಯಮವೇನೂ ಇಲ್ಲ. ಜಪಾನಿ

ಮತ್ತು ಆಝಾದ ಹಿಂದ ಸೇನೆಗಳಲ್ಲಿಯ ಸಂಬಂಧವನ್ನು ನಿಮ್ಮ ಗಮನಕ್ಕೆ ಪುನಃ ತಂದುಕೊಡಲಿಚ್ಛಿಸುತ್ತೇನೆ. ಆ. ಹಿ. ಸೇನೆಯ ಧ್ಯೇಯವನ್ನೂ ಭಾರತದ ಬಗ್ಗೆ ಜಪಾನಿಗಳು ಪ್ರತಿಜ್ಞೆ ಮಾಡಿ ವಹಿಸಿದ ಧೋರಣೆಯನ್ನೂ ತಾವು ಸ್ಮರಣೆಯಲ್ಲಿಡದೆ ಹೋದರೆ ನ್ಯಾಯಾಲಯವು ಸುಲಭವಾಗಿ ಅಡ್ಡ ದಾರಿ ಹಿಡಿಯಬಹುದು.

ನೀವು ಜಪಾನಿಗಳನ್ನು ನಂಬಿದ್ದು ಮೂರ್ಖತನವೆಂದು ಈ ನ್ಯಾಯಾಲಯವು ಅಥವಾ ಅವರಲ್ಲಿ ಯಾರಾದರೊಬ್ಬರು ಹೇಳಬಹುದೆಂಬದನ್ನು ನಾನು ಒಪ್ಪುತ್ತೇನೆ. ಆದರೆ ಅದೀಗ ಅಪ್ರಸ್ತುತ. ಅಝಾದ ಹಿಂದ ಸೇನೆಯನ್ನು ರಚಿಸಿದವರು ತಮ್ಮ ರಾಷ್ಟ್ರಕ್ಕಾಗಿ ಸ್ವಾತಂತ್ರ್ಯ ಸಂಪಾದಿಸಲು ಸಾಧ್ಯವಿದೆಂದು ನಂಬಿದ್ದರೋ ಎಂಬುದೇ ಈಗಿನ ಪ್ರಶ್ನೆ. ಭಾರತದ ಸ್ವಾತಂತ್ರ್ಯ ಸಾಧನೆಗಾಗಿ ಆ. ಹಿ. ಸೇನೆಯು ಜಪಾನಿಗಳನ್ನು ಮೊದಲು ಮಾಡಿ ಎಲ್ಲರೊಂದಿಗೂ ಕಾದಲು ಸಿದ್ಧವಿತ್ತೆಂದು ಸರಕಾರೀ ಸಾಕ್ಷಿಗಳೇ ಹೇಳಿದ್ದಾರೆ. ಆಝಾದ ಹಿಂದ ಸೈನಿಕರು ತಾವು ಹೂಡಿದ ಆಂದೋಲನವು ನ್ಯಾಯವಾದದ್ದೆಂದೂ ತಮ್ಮ ಧ್ಯೇಯವು ಸರಿಯಾದದ್ದೆಂದೂ ನಂಬಿದ್ದರು.

### ಆಝಾದ ಹಿಂದ ಸೇನೆಯು

ಜಪಾನಿಗಳ ಕೈಗೊಂಬೆಯಾಗಬಾರದೆಂದು ಮೋಹನಸಿಂಹರು ಅಧೀರರಾದ್ದರಿಂದ ಜಪಾನಿಗಳು ರಾಸಬಿಹಾರಿಯವರಿಂದ ಅವರನ್ನು ಬಂಧಿಸಿದರು. ದ್ವಿತೀಯ ಆಝಾದ ಹಿಂದ ಸೇನೆಯೊಡನಿದ್ದ ಸಂಬಂಧದಲ್ಲಿ ಜಪಾನಿಗಳು ಅಸಮಾಧಾನದಿಂದಿದ್ದರೆಂದು ಹೇಳಬಹುದು ಆದರೆ ವಿರೋಧಿಯು ಪ್ರಬಲನಾಗಿದ್ದಾಗ ನೀವು ನಿಮ್ಮ ದಾರಿಯನ್ನು ಕಂಡುಕೊಳ್ಳಬೇಕಾಗುವದು.

ದ್ವಿತೀಯ ಅಝಾದ ಹಿಂದ ಸೇನೆಯು ಜಪಾನಿಗಳ ಹಸ್ತಕವಲ್ಲದ ತಾತ್ಪೂರ್ತಿಕ ಸರಕಾರವನ್ನು ಸ್ಥಾಪಿಸಿಕೊಂಡಿತ್ತು. ಜಪಾನಿಗಳಿಂದ ಸಾಧ್ಯವಿದ್ದ ಎಲ್ಲ ಸಹಾಯ ಪಡೆದು ಭಾರತ ವಿಮೋಚನೆಗಾಗಿ ಪ್ರಯತ್ನಿಸುವದೇ ಈ ಸರಕಾರದ ಧ್ಯೇಯವಾಗಿತ್ತು.

ಇನ್ನೊಂದು ಮಾತೆಂದರೆ ಆಝಾದ ಹಿಂದ ಸೇನೆಯಲ್ಲಿ ಅಧಿಕಾರಿಗಳೆಲ್ಲ ಹಿಂದೀಯರೇ ಇದ್ದರು. ಮೇಲ್ತರಗತಿಯ ಯುದ್ಧ ಚಾತುರಿಯ ವಿಷಯವೆಲ್ಲ ಅದರಲ್ಲಿ ನುರಿತ ಜಪಾನಿಗಳ ಕೈಯಲ್ಲಿದ್ದಿತೆಂಬುದು ನಿಜ.

ಆದರೆ ಅರ್ಝಾದ ಹಿಂದ ಸೇನೆಯಲ್ಲಿದ್ದವರೆಲ್ಲ ಹಿಂದಿಗಳೇ ಆಗಿದ್ದು ಹಿಂದೀ ಅಧಿಕಾರಿಗಳಿಂದಲೇ ಆಜ್ಞೆ ಪಡೆಯುತ್ತಿದ್ದರು ಎಂದು ಸಾಕ್ಷಿಗಳು ಹೇಳಿದ್ದಾರೆ. ಆ. ಹಿ. ಸೈನಿಕರಿಗೆ ದೊರೆಯುತ್ತಿರುವ ಸೌಕರ್ಯಗಳನ್ನು ಯುದ್ಧ ಕೈದಿಗಳ ಸಂಕಟಗಳೊಂದಿಗೆ ಹೋಲಿಸಿದರೆ ವಿಶೇಷ ಲಾಭವಾಗದು.

ಅಝಾದ ಹಿಂದ ಸೈನಿಕರಿಗೆ ಅಕ್ಕಿ, ಎಣ್ಣೆ ಮತ್ತು ಸ್ವಲ್ಪ ಸಕ್ಕರೆ ಇವಿಷ್ಟೇ ಸೀದಾ ದೊರೆಯುತ್ತಿದ್ದವು. ಜನರಿಗೆ ಕೊಡಲಾಗುತ್ತಿದ್ದ ವಿಶೇಷ ಸೌಕರ್ಯಗಳ ಮೂಲಕ ಅವರು ಅ. ಹಿಂ. ಸೇನೆಯ ಕಡೆಗೆ ಸೆಳೆಯಲ್ಪಟ್ಟರು ಎಂದು ಸರಕಾರಿ ಪಕ್ಷದವರು ಹೇಳುವದು ಸರಿಯಲ್ಲ. ಅ. ಹಿಂ. ಸೇನೆಯಲ್ಲಿ ಸೇರುವವರು ಇತರ ಎಲ್ಲ ಸೈನಿಕರಂತೆ ಮರಣವನ್ನೆದುರಿಸಬೇಕಾಗುತ್ತಿತ್ತೆಂಬದನ್ನು ಮರೆಯದಿರಿ. ಬೇಕಾಗಿಯೆ ಮರಣ ತಪ್ಪಿಸಿಕೊಳ್ಳಬೇಕಾಗಿದ್ದರೆ ಅವರು ಯುದ್ಧ ಕೈದಿಯೆಂದು ಹಿಂದುಳಿಯಬೇಕಾಗುತ್ತಿತ್ತು. ಅ. ಹಿಂ. ಸೇನೆಯು ಕೇವಲ ಸ್ವಯಂಸೇವಕರಿಂದ ರಚಿತವಾದದ್ದಿತ್ತು. ಇದು ಸುಳ್ಳೆಂದು ಸರಕಾರವು ಸಿದ್ಧಪಡಿಸಬೇಕೆಂದು ಮಾಡಿದ ಪ್ರಯತ್ನಗಳು ವಿಫಲವಾದವು.

ಅ. ಹಿಂ. ಸೇನೆಯ ಬೇಕಾದವರು ತಮಗಿಷ್ಟವಿಲ್ಲದಿದ್ದರೆ ಸೇನೆಯನ್ನು ಬಿಟ್ಟು ಹೋಗಬಹುದು ಎಂದು ಈ ಮೂವರೂ ಆರೋಪಿಗಳು ಕಾಲ ಕಾಲಕ್ಕೆ ಭಾಷಣ ಮಾಡುತ್ತಿದ್ದರು ಎಂದು ಸಾಕ್ಷಿಗಳು ಹೇಳಿದ್ದಾರೆ. ಕೇವಲ ಕೆಲವೆ ಸ್ವಯಂಸೇವಕರನ್ನು ಸೈನ್ಯದಲ್ಲಿ ಸೇರಿಸಿಕೊಂಡು ಅವರಿಗೆ ಶಸ್ತ್ರಾಸ್ತ್ರಗಳನ್ನು ಕೊಡಲಾಗಿತ್ತು. ಇನ್ನೂ ಅನೇಕ ಸ್ವಯಂಸೇವಕರು ಸೇನೆಯಲ್ಲಿ ಸೇರಲು ಉತ್ಸುಕರಾಗಿ ಕಾಯುತ್ತಿದ್ದರು. ಅಂದಮೇಲೆ ಅ. ಹಿಂ. ಸೇನೆಯಲ್ಲಿ ಸೇರಲು ಜನರನ್ನು ಒತ್ತಾಯ ಪಡಿಸಲಾಗುತ್ತಿತ್ತು ಎಂದರೇನು?

ಆರೋಪಿತರು ಅತ್ಯಾಚಾರ ನಡಸಿದರೆಂದು ಕೊಟ್ಟ ಪುರಾವೆಗಳನ್ನು ಗಮನಕ್ಕೆ ತೆಗೆದುಕೊಳ್ಳಬಾರದೆಂದು ನಾನೊಂದು ಅರ್ಜಿಕೊಡುತ್ತೇನೆ. ಯಾಕಂದರೆ ಆರೋಪಿತರು ಯುದ್ಧ ಬಂದಿಗಳಿಗೆ ಯಾವದೇ ತರದ ಹಿಂಸೆ ಕೊಟ್ಟಿಲ್ಲ. ಆ ರೀತಿ ಪುರಾವೆಗಳು ಇಲ್ಲ. ಆರೋಪಿತರ ತಿಳುವಳಿಕೆಯಿಂದ ಅಥವಾ ಅವರ ಹೆದರಿಕೆಯಿಂದ ಅಝಾದ ಸೈನ್ಯ ಸೇರುವಂತೆ ಮಾತ್ರ ಕೆಲವರಿಗೆ ತೊಂದರೆ ಕೊಟ್ಟರೆಂದು ಹೇಳಲಾಗಿದೆ. ಆದರೆ ಆ ರೀತಿ ಹಿಂಸೆ ನಡೆದದ್ದು ಆರೋಪಿತರಿಗೆ ಗೊತ್ತಿತ್ತೋ ಎಂಬದನ್ನು ಸಿದ್ಧಮಾಡಿಲ್ಲ. ತದ್ವಿರುದ್ಧ

ಕೆವಲರು ಸಾಕ್ಷಿ ನುಡಿದಿರುವರು. ಕಾರಣ ಆರೋಪಗಳು ಪೂರ್ಣ ಸಿದ್ಧವಾಗಿಲ್ಲವಾದ್ದರಿಂದ ಅವುಗಳನ್ನು ಬಿಟ್ಟು ಬಿಡಬೇಕು.

ಹಿಂಸೆಯ ಬಗ್ಗೆ ಪುರಾವೆ ಕೊಟ್ಟ ಸಾಕ್ಷೀದಾರರು ಮರುಸವಾಲಿನಲ್ಲಿ ಅವುಗಳನ್ನು ಸಿದ್ಧಮಾಡಿ ಕೊಡಲಿಲ್ಲ. ಸಾಕ್ಷೀದಾರರಿಗೆ ಕೊಟ್ಟ ಶಿಕ್ಷೆಗಳು ಶಿಸ್ತುಭಂಗ ಅಥವಾ ಇತರ ಅಪರಾಧಗಳಿಗಾಗಿ ಇರುವವಲ್ಲದ, ಅಝುದ ಸೈನ್ಯ ಸೇರುವಂತೆ ಒತ್ತಾಯ ಸಮಯದಲ್ಲಿ ಅಲ್ಲ. ಒಂದು ಉದಾಹರಣೆಯಲ್ಲಿ, ಕೆಲವರು ಆಕಳನ್ನು ಕೊಂದದ್ದಕ್ಕೆ ಸ್ಥಾನಬದ್ಧ ಶಿಬಿರಕ್ಕೆ ಕಳಿಸಲ್ಪಟ್ಟರು. ಇನ್ನೊಂದರಲ್ಲಿ ಶಿಸ್ತುಭಂಗ ಮಾಡಿದ್ದಕ್ಕೆ ಕೆಲವರಿಗೆ ಶ್ರಮದ ಕೆಲಸ ಕೊಡಲಾಯಿತು. ಯುದ್ಧ ಬಂದಿಗಳು ಶಿಸ್ತನ್ನು ಮುರಿದಾಗ ಶ್ರಮದ ಕೆಲಸ ಕೊಡುವ ಪರಿಪಾಠ ಎಲ್ಲ ಕಡೆಗೂ ಇದೆ. ಆ ಶ್ರಮದ ಕೆಲಸವಾದರೂ ಎಂತಹದು? ಅವರು ತಂತಮ್ಮ ಹಳ್ಳಿಗಳಲ್ಲಿ ಮಾಡುವಂತಹದೇ ಅದು.

ಸರಕಾರಿಪರ ೧೧ನೇ ಸಾಕ್ಷೀದಾರನಾದ ಮಹಮ್ಮದ ನವಾಜನು, ತನಗೆ ಒಣಗಿದ ಶೆಗಣಿ ಕೂಡಹಾಕಿ, ಅದರಲ್ಲಿ ಸೋಡಾ ಮಿಶ್ರಣಮಾಡಿ ಗೊಬ್ಬರ ತಯಾರಿಸುವದಕ್ಕೆ ಹಚ್ಚಿದ್ದರೆಂದು ತಕರಾರು ಮಾಡಿದನು. ಇದಕ್ಕೆ ಚಿತ್ರ ಹಿಂಸೆಯನ್ನುವದು ಅಪಹಾಸ್ಯವೇ ಸರಿ. ಯಾರ್‍ಯಾರು ಶಿಸ್ತುಭಂಗ ಮಾಡಿದ್ದರೋ ಅವರೆಲ್ಲರೂ ಇಲ್ಲಿಗೆ ಬಂದು ಅಝುದ ಸೈನ್ಯ ಸೇರುವದನ್ನು ತಾವು ಪ್ರತಿಭಟಿಸಿದುದಾಗಿ ಹೇಳಿದ್ದಾರೆ. ಆದುದರಿಂದ ಅವರ ಪುರಾವೆಗಳನ್ನು ನಿರಾಕರಿಸತಕ್ಕದ್ದು.

## ಕೊಲೆಯ ಆರೋಪ

ಕೊಲೆಮಾಡಿದ ಅಥವಾ ಕೊಲೆಗೆ ಸಹಾಯಮಾಡಿದ ಆರೋಪಗಳು ಸಿದ್ಧವಾಗಿರುವದಿಲ್ಲ. ಈ ಆರೋಪಗಳು ಎರಡು ವಿಧವಾಗಿರುತ್ತವೆ. (೧) ೪ ಜನರನ್ನು ಗುಂಡಿಕ್ಕಿ ಕೊಂದುದು (೨) ಮಹಮ್ಮದ ಹುಸೇನನನ್ನು ಗುಂಡಿಕ್ಕಿ ಕೊಂದುದು ಮೊದಲನೆಯದರ ಬಗ್ಗೆ ಹೇಳುವದಾದರೆ ಆ ಸಂಬಂಧದಲ್ಲಿ ಅಪರಾಧ ವರದಿ ಇತ್ತು. ಎರಡನೆಯದರ ವಿಷಯದಲ್ಲಿ ಅದೂ ಇದ್ದಿಲ್ಲ. ಈ ಎರಡು ಪ್ರಕರಣಗಳ ಸಂಬಂಧದಲ್ಲಿ ಅವರಿಗೆ ಮರಣ ದಂಡನೆ ವಿಧಿಸಿದ ಅಥವಾ ಅವುಗಳನ್ನು ಕಾರ್ಯಕಾರೀ ಮಾಡಿದಬಗ್ಗೆ ಬರೆಹದ ಪುರಾವೆಗಳಿಲ್ಲ.

ಮಹಮ್ಮದ ಹುಸೇನನ ಕೊಲೆಯ ಬಗ್ಗೆ ಸಾಕ್ಷಿ ನುಡಿದ ಅಲ್ಲಾ ದಿತ್ತಾ ಅಪರಾಧದ ವರದಿಯ ಮೇಲೆ ಕ್ಯಾ. ಶಹಾನವಾಜರು ಏನೋ ಬರೆದಿದ್ದ ರೆಂದು ಹೇಳಿದ್ದರು. ಆದರೆ ಮರುಸವಾಲಿನಲ್ಲಿ ಅದು ಅಪರಾಧದ ವರದಿ ಎಂಬುದು ತನಗೆ ಗೊತ್ತಿಲ್ಲದೆಂದೂ ಅದು ಕೇವಲ ವರದಿ ಇತ್ತೆಂದೂ ಹೇಳಿದನು.

ಶಿಪಾಯಿ ಜಾಗಿರಿ ರಾಮನು, ತಾನು ಹಿಂದೆಂದೂ ಬಂದೂಕ ಹಿಡಿದಿದ್ದಿಲ್ಲವೆಂದೂ ಆದರೂ ಮಹಮ್ಮದ ಹುಸೇನನಿಗೆ ಗುಂಡು ಹೊಡೆಯಲು ಇನ್ನಿಬ್ಬರ ಜೊತೆಗೆ ತನ್ನನ್ನೂ ನಿಲ್ಲಿಸಿದ್ದರೆಂದೂ ಮೂವರ ಗುಂಡುಗಳೂ ಮೃತನ ಎದೆಯಲ್ಲಿ ನೆಟ್ಟವೆಂದೂ ಹೇಳಿದ್ದಾನೆ. ಬಂದೂಕನ್ನು ಹಿಡಿಯಲು ಕಲಿಯದಿದ್ದವನು ಹೀಗೆ ಗುರಿಯಿಟ್ಟು ಹೇಗೆ ಹೊಡೆದನೋ ಎಂಬುದು ಆಶ್ಚರ್ಯಕರವಿರುತ್ತದೆ. ಇದು ಸಾಕ್ಷಿದಾರನ ಮೂರ್ಖತನದ ಪರಮಾವಧಿ ಎಂಬದರ ಹೊರ್ತು ಮತ್ತೇನು ಹೇಳಬೇಕು.

ಮಹಮ್ಮದ ಹುಸೇನನನ್ನು ಗುಂಡಿಕ್ಕಿ ಕೊಂದಾಗ್ಯೂ ಅವನ ಮೈಮೇಲೆ ರಕ್ತ ಕಾಣಿಸಲಿಲ್ಲವೆಂದು ನಾಯಿಕ ಮಹಮ್ಮದನು ಹೇಳಿರುವನು. ಮೂರು ಗುಂಡುಗಳು ಎದೆಯಲ್ಲಿ ನಟ್ಟಿದ್ದರೂ ರಕ್ತ ಕಾಣಿಸಲಿಲ್ಲವೆಂದ ಮೇಲೆ ಈ ಮಾತು ಸುಳ್ಳಿರುವದು. ಅಲ್ಲದೆ ಗುಂಡು ಹೊಡೆದ ಮೂವರಲ್ಲಿ ಇನ್ನಿಬ್ಬರು ಯಾರೆಂಬದನ್ನೂ ಜಾಗೀರಿ ರಾಮನು ಗುರುತಿಸಿಲ್ಲ.

ಇಷ್ಟು ಜನರು ಸಾಕ್ಷಿ ಕೊಟ್ಟಿದ್ದರೂ, ಗುಂಡಿಗೆ ತುತ್ತಾದರೆಂದು ಹೇಳುವ ೪ ಜನರು ಯಾರೆಂಬದನ್ನು ಗುರುತಿಸಲಿಕ್ಕೆ ಅವರಿಗೆ ಸಾಧ್ಯವಾಗಿಲ್ಲ.

ಈ ನಾಲ್ಕು ಜನರಿಗೆ ಗುಂಡು ಹಾಕಲು ಲೆ. ಧಿಲನರು ಆಜ್ಞೆ ಕೊಟ್ಟರೆಂದು ಆರೋಪಿಸಲಾಗಿದೆ. ಆದರೆ ಅದೇ ಸಮಯದಲ್ಲಿ ಲೆ. ಧಿಲನರು ಅತೀವ ಜಡ್ಡಿನಿಂದ ಹಾಸಿಗೆ ಹಿಡಿದಿದ್ದರೆಂದು ಪ್ರತಿ ಪುರಾವೆಯಿಂದ ಸಿದ್ಧವಾಗಿದೆ. ಹೀಗಿರುವಾಗ, ಅವರು ಅವನನ್ನು ಕೊಲ್ಲುವ ಮುಂದೆ ಹಾಜರಿದ್ದರೆಂದು ನಂಬುವದೆಂತು? ಮೇಲಾಗಿ ಈ ನಾಲ್ಕು ಜನರನ್ನು ಕೊಲ್ಲುವ ಪ್ರಸಂಗ ನಡೆಯಲೇ ಇಲ್ಲವೆಂದು ನನ್ನ ಅಭಿಮತ. ಯಾಕಂದರೆ ಈ ಕೊಲೆ ನಡೆ

ದಾಗ ತಾವು ಹಾಜರಿದ್ದೆವೆಂದು ಇಬ್ಬರು ಸಾಕ್ಷಿದಾರರು ಹೇಳಿದ್ದಾರೆ, ಆದರೆ ಅವರಲ್ಲೊಬ್ಬನು ಇನ್ನೊಬ್ಬನು ಇದ್ದಿಲ್ಲವೆಂದು ನುಡಿದಿದ್ದಾನೆ.

ಇಂಥ ಖಟ್ಲೆ ಸಾಮಾನ್ಯ ಕೋರ್ಟಿನಲ್ಲಿ ನಡೆದಿದ್ದರೆ ಅಷ್ಟೊಂದು ಅಕಸ್ತರಾಗಿದ್ದ ಧಿಲನರು ಗುಂಡು ಹೊಡೆಯಲು ಆಜ್ಞೆ ಕೊಟ್ಟರೆಂದು ಯಾವ ಜ್ಯೂರಿಗಳೂ ಅಭಿಪ್ರಾಯಪಡುತ್ತಿದ್ದಿಲ್ಲ. ನೀವಾದರೂ ನ್ಯಾಯ ನಿರ್ಣಾಯಕರಲ್ಲವೆಂದು ನಾನು ಹೇಳುವದಿಲ್ಲ ಆದರೆ ನಿಮ್ಮ ಮುಂದಿರುವ ಪುರಾವೆಗಳನ್ನು ನೋಡಿ ನಿರ್ಣಯ ಮಾಡಿರಿ. ಲೆ. ಧಿಲನರು ಅಂದು ಗುಂಡು ಹೊಡೆಯುವಾಗ ಹಾಜರಿದ್ದರೆನ್ನುವದು ಶುದ್ಧ ಸುಳ್ಳು.

ಮುಹಮ್ಮದ ಹುಸೇನನಿಗೆ ಗುಂಡು ಹಾಕಿದರೆಂದು ಹೇಳುವ ಮೂವರಲ್ಲಿ ಇನ್ನಿಬ್ಬರು ಜೀವಂತರಿದ್ದೂ, ಕೊಲೆಯನ್ನು ಸಿದ್ಧಮಾಡಲಿಕ್ಕೆ ಅವರನ್ನು ಸಾಕ್ಷಿಗಾಗಿ ಕರಿಸಿರುವದಿಲ್ಲ.

## ಸತ್ತ ೪ ಜನರು ಯಾರು ?

ಗುಂಡಿನಿಂದ ಮೃತರಾದ ನಾಲ್ವರು ಜಾಟರೆಂದು ಮಾತ್ರ ಎಲ್ಲ ಸಾಕ್ಷಿದಾರರು ಹೇಳಿರುವರು. ಅಪರಾಧದ ವರದಿಯಲ್ಲಿ ಕಾಣಿಸಿದವರೇ ಆ ನಾಲ್ವರು ಎಂದು ಪೂರ್ಣ ಸಿದ್ಧವಾದ ಹೊರ್ತು ಅದನ್ನು ನಂಬುವಂತಿಲ್ಲ. ಆರೋಪ ಪಟ್ಟಿಯಲ್ಲಿ ಕೇವಲ ನಾಲ್ಕು ಜನರು ಗುಂಡಿಕ್ಕಲ್ಪಟ್ಟರೆಂದು ಹೇಳಿದರೆ ಅಪರಾಧ ವರದಿಯಲ್ಲಿ ಕಾಣಿಸಿದ ನಾಲ್ವರು ಸತ್ತರೆಂದು ಹೇಳಿದೆ. ಅವರೇ ಸತ್ತರೆಂದು ಸಿದ್ಧಮಾಡಬೇಕು. ಇದು ಸಿದ್ಧವಾಗಿಲ್ಲ. ಯಾರೋ ನಾಲ್ವರು ಗುಂಡಿಕ್ಕಿ ಕೊಲ್ಲಲ್ಪಟ್ಟದ್ದನ್ನು ನೋಡಿ ಆರೋಪಿತರಿಂದಲೇ ಅದು ಘಟಿಸಲ್ಪಟ್ಟಿತೆಂದು ನಿರ್ಣಯಕ್ಕೆ ಬರುವದು ತಪ್ಪಾಗುತ್ತದೆ. ಮೇಲಾಗಿ ಈ ಘಟನೆ ನಡೆಯಿತೆಂಬುದಕ್ಕೇ ಸಾಕಷ್ಟು ಪುರಾವೆಗಳಿಲ್ಲ. ಇದನ್ನು ಸಿದ್ಧಮಾಡುವದು ಅಡ್ವೋಕೇಟ ಜನರಲ್ಲರನ್ನೇ ಕೂಡಿರುವದು. ಈ ನಾಲ್ವರ ಕೊಲೆಯ ವಿಷಯವಾಗಿ ಹೇಳುವದಾದರೆ ಅವರಿಗೆ ಮರಣ ದಂಡನೆಯ ಶಿಕ್ಷೆವಿಧಿಸಲ್ಪಟ್ಟಿತು. ಆದರೆ ಅದನ್ನು ಕಾರ್ಯಕಾರಿ ಮಾಡಲಿಲ್ಲ.

## ಸಹಗಲರು ಯುದ್ಧ ಬಂದಿಗಳು

ಕ್ಯಾ. ಸಹಗಲರು ಯುದ್ಧ ಬಂದಿಗಳಾಗುವ ಕರಾರುಗಳನ್ನು ಕ[illegible] ಕಿಟ್ಸನ್ನರಿಗೆ ಮೊದಲು ಒಪ್ಪಿಸಿ ಅವುಗಳಿಗೆ ಮನ್ನಣೆ ದೊರೆತನಂತರ ಶರಣ

ಹೋದುದರಿಂದ ಅವರನ್ನು ಯುದ್ಧಬಂದಿಗಳೆಂದು ನಡಿಸಿಕೊಳ್ಳಬೇಕು. ರಂಗೂನದಲ್ಲಿಯ ಬ್ರಿಟಿಶ ಅಧಿಕಾರಿಗಳು ಅಝಾದ ಸೈನ್ಯವು ಒಂದು ಸುಸಂಘಟಿತ ಸೈನ್ಯವೆಂದು ಒಪ್ಪಿ ಅದರ ಅಧಿಕಾರಿಗಳೊಡನೆ ಪತ್ರವ್ಯವಹಾರ ನಡಿಸಿದ ನಾಲ್ಕು ಕಾಗದ ಪತ್ರಗಳನ್ನು ನಮ್ಮ ಕೊನೆಯ ಸಾಕ್ಷಿದಾರರಾದ ಕ್ಯಾ. ಅರಶದರು ಹಾಜರಮಾಡಿದ್ದಾರೆ. ಅಂದರೆ ಅಝಾದ ಸೈನ್ಯವು ಸುಸಂಘಟಿತ ಸೈನ್ಯವೆಂದು ಅವರು ಒಪ್ಪಿದ್ದರಿಂದ ಶರಣು ಬಂದ ಮೇಲೆ ಅದರ ಸದಸ್ಯರನ್ನು ಯುದ್ಧಬಂದಿಗಳಂತೆ ನಡಿಸಿಕೊಳ್ಳುವದು ಕ್ರಮಪ್ರಾಪ್ತವು.

## ಖಟ್ಲೆ ನಡಿಸಲು ಅಧಿಕಾರವಿಲ್ಲ.

ಇನ್ನು ನಾನು ಕೆಲವು ಕಾಯಿದೆ ಮುದ್ದೆಗಳನ್ನು ನಿಮ್ಮ ಮುಂದಿಡುತ್ತೇನೆ.

(೧) ದಂಡಿನ ನ್ಯಾಯಾಲಯವು ನಾಗರಿಕ ಅಪರಾಧವನ್ನು ವಿಚಾರಿಸಬಹುದು. ಆದರೆ ಕ್ರಿಮಿನಲ್ ಕೋರ್ಟುಗಳಲ್ಲಿಯೇ ವಿಚಾರಣೆ ನಡಿಸಲು ಯೋಗ್ಯವಾದ ಅಪರಾಧಗಳೇ ನಾಗರಿಕ ( ಸಿವ್ಹಿಲ್ ) ಅಪರಾಧಗಳೆಂದು ವಿವರಿಸಲಾಗಿದೆ. ಕ್ರಿಮಿನಲ್ ಕೋರ್ಟುಗಳಲ್ಲಿ ವಿಚಾರವಾಗತಕ್ಕ ಅಪರಾಧಗಳು ಕ್ರಿಮಿನಲ್ ಪ್ರೋಸೀಜರ ಕೋಡದನ್ವಯ ಉದ್ಭೂತವಾಗುತ್ತವೆ. ನಾನು ಹೀಗೆ ಹೇಳಿದ ಮಾತ್ರಕ್ಕೆ ಕ್ರಿ. ಪ್ರೊ, ಕೋ. ಈ ನ್ಯಾಯಾಲಯಕ್ಕೂ ಅನ್ವಯಿಸುವವೆಂದು ನಾನು ವಾದಿಸುತ್ತೇನೆಂದು ತಿಳಿಯಕೂಡದು. ನನ್ನ ಹೇಳಿಕೆ ಇಷ್ಟೇ. ಕ್ರಿಮಿನಲ್ ಕೋರ್ಟುಗಳು ತಾವಾಗಿಯೇ ಅಪರಾಧಿಗಳನ್ನು ತಂದು ನಿಲ್ಲಿಸಿ ವಿಚಾರಿಸಲಾರವು. ಹಾಗೆ ಅವುಗಳಿಗೆ ಅಧಿಕಾರವಿಲ್ಲ. ಅದರಂತೆ ಕ್ರಿಮಿನಲ್ ಕೋರ್ಟುಗಳಿಗೆ ಯಾವ ಅಧಿಕಾರವಿಲ್ಲವೋ ಅದು ದಂಡಿನ ನ್ಯಾಯಾಲಯಕ್ಕೂ ಪ್ರಾಪ್ತವಾಗುವದಿಲ್ಲ. ಸ್ಥಾನಿಕ ಸರಕಾರದವರು ತಕರಾರು ಮಾಡಿದಾಗ ಮಾತ್ರ ಕ್ರಿಮಿನಲ್ ಕೋರ್ಟುಗಳು ಅಪರಾಧವನ್ನು ವಿಚಾರಿಸಬಲ್ಲವು. ಈ ವಿಷಯದಲ್ಲಿ ಅಂಥ ತಕರಾರನ್ನು ಯಾರೂ ಮಾಡಿಲ್ಲವಾದ್ದರಿಂದ ಈ ಖಟ್ಲೆ ವಿಚಾರಿಸಲು ಈ ನ್ಯಾಯಾಲಯಕ್ಕೆ ಅಧಿಕಾರವಿರುವದಿಲ್ಲ.

## ವಿಚಾರಣೆ ಅಕ್ರಮವಿದೆ

(೨) ಗುಂಡಿಕ್ಕಿ ಕೊಲೆಮಾಡಿದ ಘಟನೆ ನಡೆಯಿತೆಂದು ಕ್ಷಣ ಹೊತ್ತು ತಿಳಿಯುವಾ ಆದರೆ ಆ ಕೊಲೆಗಳನ್ನು ವೈಯಕ್ತಿಕವಾಗಿ ಅಥವಾ ವೈಯಕ್ತಿಕ ದ್ವೇಷದ ಮೂಲಕ ಮಾಡಲಾಗಿದೆಯೆಂದು ಸಿದ್ಧಮಾಡಿಲ್ಲ. ಒಂದು ಸುಸಂಘಟಿತ ಸೈನ್ಯವು ಯುದ್ಧ ನಿರ್ವಹಣದ ಕಾಲದಲ್ಲಿ ಕೈಕೊಂಡ ಶಿಸ್ತುಭಂಗದ ಉಪಾಯಗಳಿವು. ಒಂದು ವೇಳೆ ನ್ಯಾಯಾಲಯದವರ ಅಭಿಪ್ರಾಯವು ಇದಕ್ಕೆ ವಿರುದ್ಧವಾಗಿದ್ದರೆ, ಕೊಲೆಯು ಮತ್ತು ಕೊಲೆಗೆ ಸಹಾಯ ಮಾಡಿದ ಆರೋಪಗಳು ಈ ನ್ಯಾಯಾಲಯದ ನಿಯಮಾವಲಿಯ ೨೪ನೇ ನಿಯಮದನ್ವಯ ಸ್ವತಂತ್ರವಾದವುಗಳಾಗುತ್ತವೆ. ಅಂದ ಮೇಲೆ ಕೂಡಿಯೇ ವಿಚಾರಣೆ ನಡೆಸಿದ್ದು ಅಕ್ರಮವಿರುವದು. ೨೪ನೇ ನಿಯಮಕ್ಕೆ ವಿರುದ್ಧವಾಗಿ ನಡೆದ ಖಟ್ಲೆ ಅಕ್ರಮವೆಂದು ಪ್ರೀವ್ಹಿ ಕೌನ್ಸಿಲದವರು ಹಿಂದಕ್ಕೆ ನಿರ್ಣಯ ಕೊಟ್ಟಿರುತ್ತಾರೆ, (ಶ್ರೀ. ಭೂಲಾಭಾಯಿಯವರು ಅದನ್ನು ಓದಿ ಹೇಳಿದರು.) ಇದನ್ನೇ ಬೇರೆ ಶಬ್ದಗಳಲ್ಲಿ ಹೇಳುವದಾದರೆ, ಒಂದೇ ಖಟ್ಲೆಯಲ್ಲಿ ३-೪ ಅಪರಾಧಗಳ ವಿಚಾರಣೆಯಾಗತಕ್ಕದ್ದಲ್ಲ. ಆರೋಪಿಗಳೆಲ್ಲ ಸೇರಿ ಅದೇ ಅಪರಾದ ಮಾಡಿದ್ದರೆ ಮಾತ್ರ ಬರುತ್ತದೆ. ಇಲ್ಲಿ ಮೂವರು ಆರೋಪಿಗಳ ಮೇಲೆ ಭಿನ್ನ ಭಿನ್ನ ಆರೋಪಗಳಿರುವವು. ಅರಸರ ವಿರುದ್ಧ ಯುದ್ಧ ಹೂಡಿದ ಅಪರಾಧವನ್ನಾಗಲೀ ಇಲ್ಲವೇ ಕೊಲೆಯ ಆರೋಪವನ್ನಾಗಲೀ ಈಗ ತೆಗೆದು ಹಾಕುವೆವೆಂದು ಹೇಳುವ ಕಾಲ ಮೀರಿ ಹೋಗಿದೆ.

## ಉಪಸಂಹಾರ

ಶ್ರೀ. ಭೂಲಾಭಾಯಿಯವರು ಉಪಸಂಹಾರ ಮಾಡುತ್ತ ಹೇಳಿದ್ದೇನೆಂದರೆ:—

(೧) ಅಪರಾಧಿಗಳು ವೈಯಕ್ತಿಕವಾಗಿ ಏನೂ ಮಾಡಿಲ್ಲ. ಪರರ ಮನ್ನಣೆಗೆ ಪಾತ್ರವಾದ ಒಂದು ಸರಕಾರದ ಸಂಘಟಿತ ಸೈನ್ಯದ ಸದಸ್ಯರಿರುವರು. ಆದುದರಿಂದ ಯುದ್ಧ ನಿಯಮದಂತೆ ಇವರನ್ನು ನಡಿಸಿಕೊಂಡು ಅದರನ್ವಯ ದೊರೆಯತಕ್ಕ ಎಲ್ಲ ಸವಲತ್ತುಗಳನ್ನೂ ಕೊಡಬೇಕು.

(೨) ರಾಜನಿಷ್ಠೆಯ ಪ್ರಶ್ನೆ ಇಲ್ಲಿ ಅಪ್ರಸ್ತುತ: ಬ್ರಿಟಿಶ್ ವಸಾಹತುಗಳು ರಾಜನಿಷ್ಠೆಯ ಪ್ರಮಾಣ ತೆಗೆದುಕೊಂಡಿದ್ದದೂ ಮಾತೃಭೂಮಿಯ

ವಿಮೋಚನೆಯ ಯುದ್ಧ ಪ್ರಾರಂಭವಾದ ಕೂಡಲೇ ಅದನ್ನು ಬಿಸುಟಬ ಹುದು. ಇದಕ್ಕೆ ಅಮೇರಿಕೆಯ ಉದಾಹರಣೆಯ ನಿದರ್ಶನವಾಗಿದೆ.

(೩) ಅಝಾದ ಸೈನ್ಯವು ಸ್ವಯಂ ಪ್ರೇರಿತರಾಗಿ ಮುಂದೆ ಬಂದವರ ಸೈನ್ಯವಾಗಿತ್ತು. ಒತ್ತಾಯದ ಸೈನ್ಯ ಸಂಗ್ರಹವಿದ್ದರೂ ಅದರಿಂದ ಹೆಚ್ಚು ವ್ಯತ್ಯಾಸವಾಗುವದಿಲ್ಲ. ಯಾಕಂದರೆ ಒತ್ತಾಯದ ಸೈನ್ಯ ಸಂಗ್ರಹ ಕಾಯಿದೆ ಅನೇಕ ರಾಷ್ಟ್ರಗಳಲ್ಲಿ ಜಾರಿಯಲ್ಲಿರುತ್ತದೆ. ಅದನ್ನು ತಪ್ಪಿಸಿದವರಿಗೆ ಶಿಕ್ಷೆ ಯನ್ನೂ ಹೇಳಿದೆ.

(೪) ಕೊಲೆಯ ಆರೋಪಗಳು ಯುದ್ಧ ನಿರ್ವಹಣ ಚಟುವಟಿಕೆಯ ಭಾಗಗಳಾಗಿರುವವು. ಅಝಾದ ಸರಕಾರದಿಂದ ಸ್ಥಾಪಿತವಾದ ಕೋರ್ಟು ಗಳಲ್ಲಿ ಕಾಯಿದೆಯಂತೆ ಆ ಶಿಕ್ಷೆಗಳು ವಿಧಿಸಲ್ಪಟ್ಟಿರುವವು.

(೫) ಅಝಾದ ಸರಕಾರವು ಸುಸಂಘಟಿತ ಸರಕಾರವಿತ್ತು. ಪೂರ್ವ ಏಶಿಯಾದಲ್ಲಿರುವ ಹಿಂದೀಯರೆಲ್ಲರೂ ಅದಕ್ಕೆ ರಾಷ್ಟ್ರನಿಷ್ಠೆಯ ಪ್ರತಿಜ್ಞೆ ತೆಗೆದುಕೊಂಡಿದ್ದರು. ಬರಿ ಸರಕಾರವಲ್ಲ, ಅದಕ್ಕೆ ದೇಶವೂ ಇತ್ತು. ನಿಯ ಮಕ್ಕನುಸಾರವಾಗಿ ಮೊದಲು ಯುದ್ಧ ಜಾಹೀರು ಮಾಡಿ, ಅದರಂತೆ ಹೋರಾಡಿತು.

(೬) ಅಝಾದ ಸೈನ್ಯಕ್ಕೆ ಕಾಯಿದೆಯೂ ಇತ್ತು. ಅದು ಹೆಚ್ಚು ಕಡಿಮೆ ಹಿಂದುಸ್ತಾನದ ಸೈನ್ಯ ಕಾಯಿದೆಯಂತಿರುತ್ತದೆ. ಫಟಕಿ ಶಿಕ್ಷೆಯು ಅಝಾದ ಸೈನ್ಯ ಕಾಯಿದೆಯಲ್ಲಿ ಮಾತ್ರ ಹೇಳಿದೆ. ಹಿಂದುಸ್ತಾನದ ಕಾಯಿದೆ ಯಲ್ಲಿ ಅದು ಇರದಿದ್ದರೂ ಹಿಂದುಸ್ತಾನಸಂರಕ್ಷಣ ಕಾಯಿದೆಯನ್ವಯ ಹೊರಡಿಸಿದ ಮೂರು ಒಟ್ಟು ಹುಕುಮುಗಳಲ್ಲಿದೆ. ಅಝಾದ ಸೈನ್ಯದ ಕಾಯಿದೆ ಯನ್ವಯ ಫಟಕಿ ಶಿಕ್ಷೆಯ ಪ್ರಮಾಣ ಹೆಚ್ಚಿಗಿದ್ದರೂ ಅಝಾದ ಸೈನ್ಯವು ಕಾಡುಜನವೆಂದು ಹೇಳಲಿಕ್ಕಾಗದು.

(೭) ಹಿಂಸೆಯ ಆರೋಪಗಳು:— ಜನರನ್ನು ಅಝಾದ ಸೈನ್ಯಕ್ಕೆ ಸೇರಿಸುವದಕ್ಕಾಗಿ ಹಿಂಸೆ ಕೈಕೊಳ್ಳಲಾಯಿತೆಂದು ಹೇಳಲಾಗಿದೆಯಲ್ಲದೆ

ಆರೋಪಿಗಳೇ ಅವುಗಳನ್ನು ಮಾಡಿದರೆಂದು ಸಿದ್ಧವಾಗಿಲ್ಲ. ಅವರು ಅವ
ಗಳನ್ನು ಮಾಡಲಿಲ್ಲ. ಮಾಡಲಿಕ್ಕೆ ಅಪ್ಪಣೆ ಕೊಡಲಿಲ್ಲ, ಪ್ರೋತ್ಸಾಹವನೂ
ಕೊಟ್ಟಿಲ್ಲ ಅಥವಾ ಘಟನೆ ನಡೆದದ್ದು ಅವರಿಗೆ ಗೊತ್ತಿಲ್ಲ ಸಹ.

(೮) ಕೊನೆಯದಾಗಿ. ಈ ವಿಚಾರಣೆಯು ಅಕ್ರಮವಿರುತ್ತದೆ. ಈ
ನ್ಯಾಯಾಲಯದಲ್ಲಿ ವಿಚಾರಣೆಯಾಗತಕ್ಕಂಥ ಆರೋಪವು ಇದುವಲ್ಲ
ಅಥವಾ ಸ್ಥಾನಿಕ ಸರಕಾರದ ತಕರಾರು ಇಲ್ಲದೆ ಇಂಥ ಅಪರಾಧಗಳನ
ವಿಚಾರಿಸಲು ಬರುವದಿಲ್ಲ. ಮತ್ತು ಸ್ಥಾನಿಕ ಸರಕಾರವು ಅಂಥ ತಕರಾ
ಮಾಡಿಲ್ಲ. ಆದುದರಿಂದ ಆರೋಪಿಗಳು ನಿರಪರಾಧಿಗಳೆಂದು ಜಾಹೀ
ಮಾಡಬೇಕು.



ಆಸ್ಮನ್ ತಕ್ ಉಠಾಕೇಸರ್
ಲಹರಾಯೆ ಜಾ, ಲಹರಾಯೆ ಜಾ !